



# ನಮ್ಮ ಕಾನೂನುಗಳು

## 6 ಮುಸ್ಲಿಂ ವಿವಾಹ ಕಾನೂನು
## ಆಸ್ತಿಯ ಹಕ್ಕು

ಪ್ರಕಾಶಕರು
ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ
ಹಾಗೂ
ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಕರ್ನಾಟಕ ಸರಕಾರ
ಇವರಿಗಾಗಿ,
**ಕವಿ ಕಾವ್ಯ ಟ್ರಸ್ಟ್, ಹೆಗ್ಗೋಡು**
1993, ಡಿಸೆಂಬರ್.

ಮಹಿಳೆಯ ಹಕ್ಕುಗಳು

**ಮೂಲ ಪ್ರಕಾಶಕರು**

ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯ
ಇವರಿಗೆ
ಮಾರ್ಗ್ ತಂಡದವರಿಂದ

ಕನ್ನಡ ಅವತರಣಿಕೆಯ ಪ್ರಕಾಶನವನ್ನು
ಸಾಧ್ಯವಾಗಿಸಿದ **UNICEF** ಸಂಸ್ಥೆಯ ನೆರವನ್ನು
ಗೌರವದಿಂದ ನೆನೆಯುತ್ತೇವೆ.



**ಮುಖಪುಟ**
ಪ್ರಸನ್ನ

**ಪುಸ್ತಕ ವಿನ್ಯಾಸ**
ದ್ರ ಸಿಸ್ಟಮ್ಸ್, ಹೆಗ್ಗೋಡು

**ಸಂಪಾದನೆ**
ಆಭ ಸಿಂಘಲ್ ಜೋಶಿ

**ಸಹಾಯ**
ಜ್ಯೋತಿ ಗುಪ್ತ, ಸೀಮ ಮಿಶ್ರ, ಕಮಲೇಶ ಕುಮಾರಿ

**ಅಕ್ಷರ ಜೋಡಣೆ**
ವಾಗರ್ಥ ಪ್ರಿಂಟಾನಿಕ್ಸ್, ಬೆಂಗಳೂರು

ಮುದ್ರಕರು
**ರಾಜ ಪ್ರಿಂಟರ್ಸ್**
**ಬೆಂಗಳೂರು – 560 027**
**ದೂರವಾಣಿ : 2234066**





ಎಂ. ವೀರಪ್ಪ ಮೊಯಿಲಿ
ಮುಖ್ಯ ಮಂತ್ರಿ



27, ನವೆಂಬರ್, 93.
ಬೆಂಗಳೂರು - 560001.

## ಸಂದೇಶ

ಮಹಿಳೆಯರ ಹಕ್ಕುಗಳನ್ನು ಕುರಿತ ಈ ಪುಸ್ತಕಮಾಲಿಕೆಯನ್ನು ಕನ್ನಡದ ಜನತೆಗೆ ಅರ್ಪಿಸಲಿಕ್ಕೆ ನನಗೆ ತುಂಬ ಹೆಮ್ಮೆ ಎನ್ನಿಸುತ್ತಿದೆ. ದುಡಿಯುವ ಮಹಿಳೆಯರು, ಗ್ರಾಮೀಣ ಮಹಿಳೆಯರು ಹಾಗೂ ಕೆಳವರ್ಗಗಳನ್ನು ಗಂಭೀರ ಸಮಸ್ಯೆಗಳು ಕಾಡುತ್ತಿವೆ. ಅವರು ಸಾಮಾಜಿಕವಾಗಿ ತುಳಿತಕ್ಕೆ ಒಳಗಾಗಿದ್ದಾರೆ. ಕಾರ್ಮಿಕಳಾಗಿ, ಜೀತದಾಳಾಗಿ, ಮದುವೆಯಲ್ಲಿ, ವಿಚ್ಛೇದನದಲ್ಲಿ, ಆಸ್ತಿ ಹಕ್ಕಿನಲ್ಲಿ, ಕೋರ್ಟಿನಲ್ಲಿ, ಠಾಣೆಗಳಲ್ಲಿ, ಆಕೆ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾಳೆ. ಅನೇಕರು ಅತ್ಯಾಚಾರಕ್ಕೆ ಒಳಗಾಗುತ್ತಾರೆ. ರಾಜ್ಯಾಂಗದತ್ತವಾಗಿ ಹಾಗೂ ಕಾನೂನಿನ ಅಡಿಯಲ್ಲಿ ಅವರಿಗೆ ದಕ್ಕಿರುವ ಹಕ್ಕುಗಳ ಬಗ್ಗೆ ಅವರಿಗೆ ಅರಿವಿಲ್ಲ. ಅಂತಹ ಅರಿವು ಮೂಡದ ಹೊರತು ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ನಿಲ್ಲಿಸುವುದೂ ಸಾಧ್ಯವಿಲ್ಲ. ಹಾಗೆಂದು ಭಾರಿ ಗಾತ್ರದ 'ಲಾ' ಪುಸ್ತಕಗಳನ್ನು ಓದಿ ಅರಗಿಸಿಕೊಳ್ಳಿ ಎಂದು ಅನಕ್ಷರಸ್ಥರಿಂದ ಹಾಗೂ ನವ ಸಾಕ್ಷರ ಮಹಿಳೆಯರಿಂದ ಅಪೇಕ್ಷಿಸುವುದೂ ಸಾಧುವಲ್ಲ. ಇಂತಹದ್ದೊಂದು ಸಂದಿಗ್ಧವನ್ನು ನಿವಾರಿಸುತ್ತಗೆ, ಈ ಮಾಲಿಕೆಯ ಹತ್ತು ಪುಸ್ತಕಗಳು.

ನಮ್ಮ ಸರ್ಕಾರದ ಕನ್ನಡ ಜಾಗೃತಿ ವರ್ಷದ ಆಚರಣೆಯಲ್ಲಿ ಈ ಪುಸ್ತಕಗಳ ಪ್ರಕಟಣೆ ತುಂಬ ಮಹತ್ವಪೂರ್ಣ ಕೊಡುಗೆ ಎಂದು ನನ್ನ ಭಾವನೆ. ಕನ್ನಡದ ಬೆಳವಣಿಗೆ ತುಂಬ ಅಗತ್ಯವಿರುವುದು ಕೆಳವರ್ಗಗಳಿಗೆ ಹಾಗೂ ಮಹಿಳೆಯರಿಗೆ. ಅವರನ್ನು ಗಮನದಲ್ಲಿಟ್ಟುಕೊಂಡು, ಸರಳವಾದ ಭಾಷೆ ಬಳಸಿ, ಚಿತ್ರಗಳ ಸಹಿತ, ಅವರ ಬದುಕಿಗೆ ಅನ್ವಯಿಸುವ ಉದಾಹರಣೆಗಳೊಂದಿಗೆ, ರಚಿತವಾಗಿರುವ ಈ ಪುಸ್ತಕಗಳು ಕರ್ನಾಟಕದ ಮೂಲೆ ಮೂಲೆ ತಲುಪಬೇಕು ಎಂದು ನಾನು ಆಶಿಸುತ್ತೇನೆ.

(ಎಂ. ವೀರಪ್ಪ ಮೊಯಿಲಿ)

# ಮುಸ್ಲಿಂ ವಿವಾಹ ಕಾನೂನು

**ಮೂಲ ಪಾಠ**
ಅಸೀಮ್ ಅಬ್ಬಾಸ್

**ಚಿತ್ರಗಳು**
ಪ್ರಸನ್ನ

# ಮುಸ್ಲಿಂ ವಿವಾಹ ಕಾನೂನು

ಎಲ್ಲಾ ಮುಸಲ್ಮಾನರೂ ಇಸ್ಲಾಮಿನ ಕಾನೂನಿನ ಮೇರೆಗೆ ಮದುವೆಯಾಗುತ್ತಾರೆ. ಇಸ್ಲಾಮಿನ ಕಾನೂನಿಗೆ ವಿವಿಧ ಪಂಥಗಳಿವೆ. ಸುನ್ನಿ ಮುಸಲ್ಮಾನರು ಹನಾಫಿ ಪಂಥಕ್ಕೆ ಒಳಪಡುತ್ತಾರೆ ಹಾಗೂ ಷಿಯಾ ಮುಸಲ್ಮಾನರು ಇತ್ನಾ ಅಶಾರಿ ಪಂಥಕ್ಕೆ ಒಳಪಡುತ್ತಾರೆ.

**ಇಸ್ಲಾಮಿನ ಕಾನೂನಿನ ಮೇರೆಗೆ ವಿವಾಹವಾಗಬಹುದಾದ ಜನರು ಯಾರು?**

ಇಸ್ಲಾಮಿನ ಕಾನೂನಿನ ಮೇರೆಗೆ ಮುಸ್ಲಿಮರು ಮಾತ್ರ ವಿವಾಹವಾಗಬಹುದು.

### ಕಾನೂನು ಮಾನ್ಯ ಮುಸ್ಲಿಂ ವಿವಾಹಕ್ಕೆ ಷರತ್ತುಗಳು

**ಮುಸ್ಲಿಂ ವಿವಾಹವನ್ನು ಹೇಗೆ ನೆರವೇರಿಸಬೇಕು ?**

- ಒಂದು ಪಕ್ಷಕಾರರು ವಿವಾಹದ ಪ್ರಸ್ತಾಪ ಮಾಡಬೇಕು. ಅದನ್ನು ಬೇರೆ ಪಕ್ಷಕಾರರು ಅಂಗೀಕರಿಸಬೇಕು. ಇದನ್ನು ನಿಕಾ ಎಂದು ಕರೆಯಲಾಗುತ್ತದೆ.



ನಿಕಾಗೆ ಮೌಲ್ವಿ ಮತ್ತು ಸಾಕ್ಷಿದಾರರ ಉಪಸ್ಥಿತಿ ಅತ್ಯವಶ್ಯಕ

- ಪ್ರಸ್ತಾಪ ಮತ್ತು ಅಂಗೀಕಾರವನ್ನು ಮೌಖಿಕವಾಗಿ ಮಾಡಬಹುದು.
- ನಿಕಾವನ್ನು ಮೌಲ್ವಿಯು ಸಾಕ್ಷಿದಾರರ ಸಮ್ಮುಖದಲ್ಲಿ ನೆರವೇರಿಸುತ್ತಾನೆ.
- ಬಹತೇಕ ಮೌಲ್ವಿಗಳು ವಿವಾಹಗಳ ಒಂದು ರಿಜಿಸ್ಟರನ್ನು ಇಟ್ಟಿರುತ್ತಾರೆ, ಅದರಲ್ಲಿ ವಧು, ವರ ಮತ್ತು ಸಾಕ್ಷಿದಾರರು ಸಹಿ ಮಾಡಬೇಕು.
- ವಿವಾಹ ಒಪ್ಪಂದವು ಲಿಖಿತದಲ್ಲಿದ್ದರೆ, ಅದನ್ನು 'ನಿಕಾನಾಮ' ಎಂದು ಕರೆಯಲಾಗುತ್ತದೆ. ವಧು ವರರು ನಿಕಾನಾಮಕ್ಕೆ ಸಹಿ ಮಾಡಬೇಕಾಗುತ್ತದೆ.
- ವಿವಾಹದ ಸಮಯದಲ್ಲಿ ವರನು ವಧುವಿಗೆ ಒಂದಿಷ್ಟು ಹಣವನ್ನು ಕೊಡುತ್ತಾನೆ. ಇದನ್ನು 'ಮಹರ್' ಎಂದು ಕರೆಯಲಾಗುತ್ತದೆ. ಮಹರ್ ಮೊತ್ತವನ್ನು ವಿವಾಹದ ರಿಜಿಸ್ಟರಿನಲ್ಲಿ ಹಾಗೂ ನಿಕಾನಾಮದಲ್ಲಿ ದಾಖಲು ಮಾಡಲಾಗುತ್ತದೆ.
- ವಿವಾಹದ ನೋಂದಣಿ ಕಡ್ಡಾಯವಲ್ಲ. ಅದರ ಅನುಕೂಲವೆಂದರೆ, ಸಮಸ್ಯೆ ಎದುರಾದಾಗ ಸಂಬಂಧಿಸಿದ ಪಕ್ಷಕಾರರು ಮದುವೆ ನಡೆದ ಬಗ್ಗೆ ರುಜುವಾತು ಪಡಿಸುವ ಅವಶ್ಯಕತೆ ಇರುವುದಿಲ್ಲ.

**ನಿಕಾ ಸಮಾರಂಭದ ವೇಳೆಯಲ್ಲಿ ಸಾಕ್ಷಿಗಳ ಉಪಸ್ಥಿತಿ ಅವಶ್ಯಕವೇ ?**

ಸುನ್ನಿಗಳಲ್ಲಿ ಸಾಕ್ಷಿಗಳ ಅವಶ್ಯಕತೆ ಇದೆ. ಇಬ್ಬರು ಪುರುಷರು ಅಥವಾ ಒಬ್ಬ ಪುರುಷ ಮತ್ತು ಇಬ್ಬರು ಮಹಿಳೆಯರಿರಬೇಕು. ಷಿಯಾಗಳಲ್ಲಿ ಸಾಕ್ಷಿಗಳ ಉಪಸ್ಥಿತಿ ಅವಶ್ಯವಿಲ್ಲ.

**ವಿವಾಹಗಳಲ್ಲಿ ಮೂರು ವಿಧ**

- **ಕಾನೂನು ಬದ್ಧ ವಿವಾಹ :-** ಪಕ್ಷಕಾರರ ನಡುವೆ ಎಲ್ಲಾ ಅವಶ್ಯಕ ಸಂಪ್ರದಾಯಗಳೊಂದಿಗೆ ವಿವಾಹವನ್ನು ನೆರವೇರಿಸಿದಾಗ ಅದು ಕಾನೂನು ಹಾಗೂ ಧರ್ಮದಿಂದ ಅಂಗೀಕೃತವಾದ ಕಾನೂನುಬದ್ಧ ವಿವಾಹವಾಗುತ್ತದೆ. ಅದರಿಂದ ಪಕ್ಷಕಾರರಿಗೆ ಗಂಡ ಹೆಂಡತಿಯ ಸ್ಥಾನಮಾನ ದೊರೆಯುತ್ತದೆ.

- **ಶೂನ್ಯ ವಿವಾಹ :-** ವಿವಾಹದ ಕೆಲವು ಅವಶ್ಯಕ ಷರತ್ತುಗಳನ್ನು ಉಲ್ಲಂಘಿಸಿ ಮದುವೆ ನಡೆದಿದ್ದರೆ ಅದು ಶೂನ್ಯ ವಿವಾಹವಾಗುತ್ತದೆ. ಅದರ ಅರ್ಥ ಅದು ವಿವಾಹವೇ ಅಲ್ಲ. ಉದಾಹರಣೆಗೆ ವಿವಾಹವಾದವರು, ವಿವಾಹ ನಿಶಿದ್ಧ ಸಂಬಂಧ ಹೊಂದಿದ್ದರೆ ಆಗ ಅದು ವಿವಾಹವೇ ಅಲ್ಲ.

ಅಬ್ದುಲ್ಲನು ತನ್ನ ಸೋದರ ಸೊಸೆ ರೆಹಾನಾಳನ್ನು ಮದುವೆಯಾದ. ಇಬ್ಬರು ಪುರುಷ ಸಾಕ್ಷಿಗಳ ಸಮ್ಮುಖದಲ್ಲಿ ಮೌಲ್ವಿಯು ನಿಕಾ ನೆರವೇರಿಸಿದ. ಮಹರ್ ಮೊತ್ತವನ್ನು ಗೊತ್ತು ಪಡಿಸಲಾಯಿತು. ಇಬ್ಬರೂ ನಿಕಾನಾಮಕ್ಕೆ ಸಹಿ ಮಾಡಿದರು.

ನೆನಪಿನಲ್ಲಿಡಿ:- ರೆಹಾನಾಳನ್ನು ಅಬ್ದುಲ್ಲನ ಹೆಂಡತಿಯೆಂಬುದಾಗಿ ಪರಿಗಣಿಸಲಾಗುವುದಿಲ್ಲ. ಇಸ್ಲಾಂ ಕಾನೂನಿನ ಪ್ರಕಾರ ಸೋದರಮಾವ ಮತ್ತು ಸೋದರ ಸೊಸೆ ವಿವಾಹವಾಗುವಂತಿಲ್ಲ. ಅಂತಹ ವಿವಾಹವು ಶೂನ್ಯವಾಗುತ್ತದೆ.

- ಅಕ್ರಮ ವಿವಾಹ :- ಕಾನೂನು ಬದ್ಧ ವಿವಾಹದ ಕೆಲವು ಅಗತ್ಯತೆಗಳನ್ನು ಉಲ್ಲಂಘಿಸಿ ನೆರವೇರಿದ ವಿವಾಹ ಅಕ್ರಮ ವಿವಾಹವೆನಿಸುತ್ತದೆ. ಆದರೆ ಅವು ತಾತ್ಕಾಲಿಕ ಅಥವಾ ಸರಿಪಡಿಸಬಹುದಾದ ಸ್ವರೂಪವಾಗಿರುತ್ತದೆ. ಉದಾಹರಣೆಗೆ ಸುನ್ನಿ ಪುರುಷನೊಬ್ಬ, ವಿಗ್ರಹಾರಾಧಕಳನ್ನು ಮದುವೆಯಾದರೆ ಆ ಮದುವೆ ಅಕ್ರಮ ಎಂದಾಗುತ್ತದೆ. ಆದರೆ ಆತನ ಹೆಂಡತಿಯು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದರೆ ವಿವಾಹವು ಕಾನೂನುಬದ್ಧವಾಗುತ್ತದೆ.



ಪರ್ವೀನಳ ಪತಿ ಮೃತನಾದ. ಆಕೆಯು ಇದ್ದತ್ ಆಚರಿಸದೆ ಬಾಬರನನ್ನು ವಿವಾಹವಾದಳು. ಇದು ಅಕ್ರಮ ವಿವಾಹ ಏಕೆಂದರೆ ಅವರಿಗೆ ಅನ್ವಯಿಸುವ ಕಾನೂನಿನ ಮೇರೆಗೆ, ಒಬ್ಬ ವಿಧವೆಯು, ಇದ್ದತ್‌ನ ಅವಧಿ, ಅದು ಮೂರು ಮುಟ್ಟಿನ ಅವಧಿಗಳಾಗಿವೆ, ಮುಗಿದ ನಂತರ ಮಾತ್ರ ಮತ್ತೆ ಮದುವೆಯಾಗಬಹುದು. ನಿಷೇಕಪ್ರಸ್ತ ಆಗಿದ್ದರೆ ಮಾತ್ರ ಪರ್ವೀನಳು ಮಹರ್‌ಗೆ ಹಕ್ಕುಳ್ಳವಳಾಗುತ್ತಾಳೆ. ಇಬ್ಬರಿಗೂ ಪರಸ್ಪರ ಉತ್ತರಾಧಿಕಾರದ ಹಕ್ಕು ಇರುವುದಿಲ್ಲ. ಆದರೆ ಅಂಥ ವಿವಾಹದಿಂದ ಜನಿಸಿದ ಮಕ್ಕಳು ಪೂರ್ಣವಾಗಿ ಕಾನೂನು ಸಮ್ಮತ ಮಕ್ಕಳಾಗುತ್ತಾರೆ.

ಷಿಯಾಗಳ ಇತ್ನಾ ಆಶಾರಿ ಪಂಥವು ಅಕ್ರಮ ವಿವಾಹಗಳನ್ನು ಮಾನ್ಯ ಮಾಡುವುದಿಲ್ಲ.

**ಒಬ್ಬ ಮುಸ್ಲಿಮನು ಮುಸ್ಲಿಮೇತರರನ್ನು ವಿವಾಹವಾಗಬಹುದೇ ?**

- ಒಬ್ಬ ಸುನ್ನಿ ಮುಸಲ್ಮಾನನು ಒಬ್ಬ ಕಿತಾಬಿಯ ಅಂದರೆ, ಉದಾ: ಕ್ರಿಶ್ಚಿಯನ್ ಅಥವಾ ಜ್ಯೂ ಮಹಿಳೆಯನ್ನು ವಿವಾಹವಾಗಬಹುದು.
- ಒಬ್ಬ ಷಿಯಾ ಮುಸಲ್ಮಾನನು ಒಬ್ಬ ಕಿತಾಬಿಯಳನ್ನು ಮುತಾ ವಿಧಾನದ (ತಾತ್ಕಾಲಿಕ ವಿವಾಹ) ಮೂಲಕ ಮಾತ್ರ ಮದುವೆಯಾಗಬಹುದು.
- ಸುನ್ನಿ ಅಥವಾ ಷಿಯಾ ಮಹಿಳೆಯು ಮುಸ್ಲಿಮೇತರ ಪುರುಷನನ್ನು ಮದುವೆಯಾಗುವಂತಿಲ್ಲ.

**ಒಂದು ಮುಸ್ಲಿಂ ವಿವಾಹಕ್ಕೆ ಷರತ್ತುಗಳೇನು ?**

ಮುಸ್ಲಿಂ ವಿವಾಹಕ್ಕೆ ಕೆಲವು ಅವಶ್ಯಕ ಷರತ್ತುಗಳಿವೆ. ಈ ಷರತ್ತುಗಳನ್ನು ಪಾಲಿಸದಿದ್ದರೆ ಅದು ಕಾನೂನುಬದ್ಧ ವಿವಾಹವಾಗುವುದಿಲ್ಲ.

ಈ ಷರತ್ತುಗಳೆಂದರೆ :-

- ವಿವಾಹಕ್ಕೆ ಒಂದು ಪಕ್ಷದವರಿಂದ ಪ್ರಸ್ತಾಪ ಬರಬೇಕು, ಮತ್ತೊಂದು ಪಕ್ಷದವರು ಅದನ್ನು ಒಪ್ಪಬೇಕು. ಪ್ರಸ್ತಾಪ ಹಾಗೂ ಅಂಗೀಕಾರಗಳನ್ನ ಒಂದೇ ಸಮಯದಲ್ಲಿ ಮಾಡಬೇಕು. ವಧೂವರರು ಪ್ರಾಪ್ತ ವಯಸ್ಕರಾಗಿದ್ದರೆ, ಅಂದರೆ 18 ವರ್ಷಕ್ಕಿಂತ ಹೆಚ್ಚಿನ ವಯಸ್ಸಿನವರಾಗಿದ್ದರೆ, ವರನು ಪ್ರಸ್ತಾಪ ಮಾಡುತ್ತಾನೆ. ವಧು ಸಮ್ಮತಿ ಸೂಚಿಸುತ್ತಾಳೆ. ಅವರುಗಳು ಅಪ್ರಾಪ್ತ ವಯಸ್ಕರಾಗಿದ್ದರೆ ಅವರ ಪೋಷಕರು ಪ್ರಸ್ಥಾಪ ಮಾಡುತ್ತಾರೆ.
- ಗಂಡು ಹೆಣ್ಣು ಇಬ್ಬರೂ ಮುಸ್ಲಿಮರಾಗಿರಬೇಕು. ಸುನ್ನಿ ಮುಸಲ್ಮಾನನೊಬ್ಬ ಕಿತಾಬಿಯಾ ಉದಾ: ಒಬ್ಬ ಕ್ರಿಶ್ಚಿಯನ್ ಅಥವಾ ಒಬ್ಬ ಜ್ಯೂ ಹುಡುಗಿಯನ್ನು ವಿವಾಹವಾಗಬಹುದು.

ಕೃಷ್ಣನು ಇಸ್ಲಾಂ ವಿಧಿಗಳ ಪ್ರಕಾರ ಹನೀಫಳನ್ನು ವಿವಾಹವಾದ. ಆದರೆ ಇದು ಕಾನೂನುಬದ್ಧ ವಿವಾಹವಲ್ಲ. ಅವರು ವಿಶೇಷ ವಿವಾಹ ಅಧಿನಿಯಮದ ಕಾನೂನಿನ ಮೇರೆಗೆ ವಿವಾಹವಾಗಬಹುದು.



ವಧು ವರರಿಬ್ಬರೂ ಮುಸ್ಲಿಮರಾಗಿರಬೇಕು

- ವಧು ವರರಿಬ್ಬರೂ ಹರೆಯದ ವಯಸ್ಸಿನವರಾಗಿರಬೇಕು. ಒಬ್ಬ ಅಪ್ರಾಪ್ತ ವಯಸ್ಕ ಹದಿನೈದು ವರ್ಷ ವಯಸ್ಸಾದಾಗ ಯೌವನವನ್ನು ಪಡೆಯುತ್ತಾನೆ.

ವಾಹಿದ್ ಅಜ್ರಾಳನ್ನು ವಿವಾಹವಾದ. ವಿವಾಹದ ಸಮಯದಲ್ಲಿ ವಾಹಿದ್‌ಗೆ 18 ವರ್ಷ ವಯಸ್ಸಾಗಿತ್ತು. ಅಜ್ರಾಗೆ 16 ವರ್ಷ ವಯಸ್ಸಾಗಿತ್ತು.

**ವಾಹಿದ್ ಮತ್ತು ಅಜ್ರಾ ಕಾನೂನುಬದ್ಧವಾಗಿ ಮದುವೆಯಾಗಿರುವರೇ ?**

ಹೌದು. ವಿವಾಹವು ಕಾನೂನುಬದ್ಧವಾದುದು. ಆದರೆ ಅವರು ತಾವಾಗಿಯೆ, ತಮ್ಮ ಇಚ್ಛೆಯಿಂದ ಮದುವೆಯಾಗಿದ್ದರೆ ಅವರನ್ನು ಶಿಕ್ಷಿಸಬಹುದಾಗಿದೆ.

**ಅವರನ್ನೇಕೆ ಶಿಕ್ಷಿಸಬೇಕು ?**

**ಬಾಲ್ಯ ವಿವಾಹ ನಿರ್ಬಂಧ ಅಧಿನಿಯಮ, 1929**ರ ಅನುಸಾರವಾಗಿ ವರನಿಗೆ ಕನಿಷ್ಠಪಕ್ಷ 21 ವರ್ಷ ವಯಸ್ಸಾಗಿರಬೇಕು, ವಧುವಿಗೆ 18 ವರ್ಷ ಆಗಿರಬೇಕು. 21 ವರ್ಷಕ್ಕೆ ಮೊದಲು ಬಾಲಕನು ಮದುವೆಯಾಗುವುದು 18 ವರ್ಷಕ್ಕೆ ಮೊದಲು ಬಾಲಕಿಯು ಮದುವೆಯಾಗುವುದು ಕ್ರಿಮಿನಲ್ ಅಪರಾಧವಾಗುತ್ತದೆ.

- ಹುಡುಗ ಮತ್ತು ಹುಡುಗಿ ಮಾನಸಿಕವಾಗಿ ಸ್ವಸ್ಥರಾಗಿರಬೇಕು. ಅಸ್ವಸ್ಥ ಮನಸ್ಸಿನವರು ವಿವಾಹದ ನಂತರ ಮಾಮೂಲಿ ಜೀವನ ನಡೆಸಲು ಸಾಧ್ಯವಿಲ್ಲದಿರುವುದರಿಂದ ಅಸ್ವಸ್ಥ ಮನಸ್ಸಿನವರು ವಿವಾಹವಾಗುವುದನ್ನು ಕಾನೂನು ನಿಷೇಧಿಸುತ್ತದೆ.

ಸಲೀಮನೊಂದಿಗೆ ಬೀನಾಳ ವಿವಾಹವನ್ನು ಅವಳ ತಂದೆತಾಯಿಯರು ಗೊತ್ತುಪಡಿಸಿದರು. ಸಲೀಮನು ಹುಚ್ಚನೆಂಬುದು ವಿವಾಹದ ನಂತರ ಬೀನಾಳಿಗೆ ತಿಳಿಯಿತು. ಅವಳು ತನ್ನತವರು ಮನೆಗೆ ಹಿಂದಿರುಗಿದಳು. ಅವರ ಮನೆಯವರು ಮಗಳನ್ನ ಹಿಂದಕ್ಕೆ ಕಳುಹಿಸದಿರಲು ನಿರ್ಧರಿಸಿದರು. ಬೀನಾಳ ತಂದೆ ವಕೀಲರ ಮೂಲಕ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದರು. ವಿವಾಹದ ಸಮಯದಲ್ಲಿ ಸಲೀಮನು ಅಸ್ವಸ್ಥ ಮನಸ್ಸಿನವನಾಗಿದ್ದುದರಿಂದ ನ್ಯಾಯಾಲಯವು ವಿವಾಹವನ್ನು ಶೂನ್ಯವೆಂದು ಘೋಷಿಸಿತು. ವಿವಾಹದ ನಂತರ ಸಲೀಮನು ಹುಚ್ಚನಾದರೂ ಕೂಡ ಬೀನಾ ನ್ಯಾಯಾಲಯಕ್ಕೆ ಹೋಗಿ ವಿಚ್ಛೇದನ ಕೋರಬಹುದು.

- ವಧು ಮತ್ತು ವರನು ನಿಷೇಧಿತ ಸಂಬಂಧಗಳ ಶ್ರೇಣಿಗಳೊಳಗೆ ಸಂಬಂಧ ಹೊಂದಿರಬಾರದು.



ಅಸ್ವಸ್ಥ ಮನಸ್ಸಿನವ-
ರೊಂದಿಗೆ ಮದುವೆ
ಶೂನ್ಯವೆಂದೇ
ಕಾನೂನು ಪರಿಗಣಿಸುತ್ತದೆ




**ನಿಷೇಧಿತ ಸಂಬಂಧಗಳಾವುವು ?**

ಒಬ್ಬ ವ್ಯಕ್ತಿ ಸಂಬಂಧಿಕರೊಂದಿಗೆ ಮದುವೆಯಾಗಬಾರದೆಂದು ಕಾನೂನು ಹೇಳುತ್ತದೆ. ಅಂತಹ ಸಂಬಂಧಗಳನ್ನು ''ನಿಷೇಧಿತ ಸಂಬಂಧ'' ಗಳೆಂದು ಕರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ಸಂಬಂಧಗಳು ಮದುವೆಗೆ ನಿಷಿದ್ಧವಾದ ಸಂಬಂಧಗಳೆಂದು ಕರೆಸಿಕೊಳ್ಳುತ್ತವೆ.

- ರಕ್ತಸಂಬಂಧ :-
  (1) ತನ್ನ ತಾಯಿ ಅಥವಾ ಅಜ್ಜಿಯನ್ನ ಮದುವೆಯಾಗುವಂತಿಲ್ಲ.
  (2) ತನ್ನ ಮಗಳು ಅಥವಾ ಮೊಮ್ಮಗಳನ್ನ ಮದುವೆಯಾಗುವಂತಿಲ್ಲ.
  (3) ತನ್ನ ಸೋದರ ಸೊಸೆ ಅಥವಾ ಸೋದರಸೊಸೆಯ ಮಗಳನ್ನ ಮದುವೆ ಆಗುವಂತಿಲ್ಲ.
  (4) ತನ್ನ ಸೋದರತ್ತೆ, ಅಥವಾ ಸೋದರತ್ತೆ ತಾಯಿ (ತಾಯಿಕಡೆ ಹಾಗೂ ತಂದೆಯಕಡೆ) ಯನ್ನ ಮದುವೆಯಾಗುವಂತಿಲ್ಲ.
  (5) ತನ್ನ ಸೋದರಿಯನ್ನ (ಪೂರ್ಣ, ಸಗೋತ್ರ) ಮದುವೆಯಾಗುವಂತಿಲ್ಲ.




- ಪಾಲನೆ :- ಪಾಲನೆಯ ಆಧಾರದ ಮೇಲೆ ಒಬ್ಬ ವ್ಯಕ್ತಿಯು,

  (1) ತನ್ನ ಪಾಲಿತ ತಾಯಿ ಅಥವಾ ಅವಳ ಮಗಳನ್ನು ವಿವಾಹವಾಗುವಂತಿಲ್ಲ.
- ಬಂಧುತ್ವ :- ಬಂಧುತ್ವದ ಆಧಾರದ ಮೇಲೆ ಒಬ್ಬ ವ್ಯಕ್ತಿಯು,-

  (1) ತನ್ನ ಹೆಂಡತಿಯ ಪೂರ್ವಜರು ಮತ್ತು ಸಂತತಿಯವರನ್ನು ಅಥವಾ

  (2) ತನ್ನ ಪೂರ್ವಜರು ಅಥವಾ ಸಂತತಿಯವರ ಹೆಂಡತಿಯಾಗಿದ್ದವರನ್ನ ಮದುವೆಯು ಆಗುವಂತಿಲ್ಲ.

## ವಿವಾಹ ವಿಚ್ಛೇದನ

ವಿವಾಹದ ನಂತರ ಮಹಿಳೆಯರಿಗೆ ಹಿಂಸೆ ಹಾಗೂ ಕಿರುಕುಳ ನೀಡುವ ಕೆಲವು ಸಂದರ್ಭಗಳು ಉಂಟಾಗಬಹುದಾಗಿದ್ದು ಕಾನೂನಿನಲ್ಲಿ ಪರಿಹಾರ ಮತ್ತು ರಕ್ಷಣೆ ಇದೆ. ಅಂತಹ ಒಂದು ಪರಿಹಾರ ವಿವಾಹ ವಿಚ್ಛೇದನ. ಒಬ್ಬ ಮುಸ್ಲಿಂ ಪುರುಷ ನ್ಯಾಯಾಲಯಕ್ಕೆ ಹೋಗದೆಯೇ ತನ್ನ ಹೆಂಡತಿಯಿಂದ ವಿಚ್ಛೇದನ ಪಡೆಯಬಹುದು. ಒಬ್ಬ ಮುಸ್ಲಿಂ ಮಹಿಳೆಯು ಈ ಮುಂದಿನ ವಿಧಾನಗಳಿಂದ ವಿವಾಹ ವಿಚ್ಛೇದನ ಪಡೆಯಬಹುದು.

**ಪ್ರತ್ಯಾಯೋಜಿತ ವಿವಾಹ ವಿಚ್ಛೇದನ :-** ಇದನ್ನು ತಲಾಕ್-ಎ-ತಫ್ವೀಜ್ ಎಂದು ಕರೆಯಲಾಗುತ್ತದೆ. ವಿವಾಹಕ್ಕೆ ಮೊದಲು, ವಿವಾಹದ ಸಮಯದಲ್ಲಿ ಅಥವಾ ವಿವಾಹದ ನಂತರ ವಿವಾಹ ವಿಚ್ಛೇದನ ನೀಡುವ ಹಕ್ಕನ್ನು ಪತಿಯು ತನ್ನ ಪತ್ನಿಗೆ ಪ್ರತ್ಯಾಯೋಜಿಸಬಹುದು. ಒಂದು

ನಿರ್ದಿಷ್ಟ ಘಟನೆ ಸಂಭವಿಸಿದರೆ ಗಂಡನಿಂದ ವಿಚ್ಛೇದನೆ ಪಡೆಯಲು ಹೆಂಡತಿಗೆ ಹಕ್ಕಿದೆ ಎಂದು ಕೂಡ ಒಪ್ಪಂದ ಮಾಡಿಕೊಳ್ಳಬಹುದು.

ಆಸಿಫ್ ಮತ್ತು ಅಮೀನಾ ತಮ್ಮ ವಿವಾಹಕ್ಕೆ ಮೊದಲು, ಗಂಡ 6 ತಿಂಗಳಿಗಿಂತ ಹೆಚ್ಚು ಅವಧಿಯವರೆಗೆ ದೂರ ಉಳಿದರೆ ಅಮೀನಳು ಅವನಿಂದ ವಿಚ್ಛೇದನ ಪಡೆಯಬಹುದು ಎಂದು ಒಪ್ಪಂದ ಮಾಡಿಕೊಂಡಿದ್ದರು. ವಿವಾಹವಾದ ಒಂದು ವರ್ಷದ ನಂತರ ಆಸಿಫನು 7 ತಿಂಗಳುಗಳ ಕಾಲ ತನ್ನ ಹೆಂಡತಿಯಿಂದ ಬೇರೆಯಾಗಿ ಉಳಿದುಕೊಂಡ. ಅಮೀನಳು ವಿವಾಹ ವಿಚ್ಛೇದನದ ಪ್ರತ್ಯಾಯೋಜಿತ ಅಧಿಕಾರವನ್ನು ಬಳಸಿಕೊಂಡು ಆಸಿಫನಿಂದ ವಿಚ್ಛೇದನ ಪಡೆದಳು.

ಈ ರೀತಿಯ ವಿವಾಹ ವಿಚ್ಛೇದನದಲ್ಲಿ ಹೆಂಡತಿ ಗಂಡನ ಪರವಾಗಿ ವಿವಾಹ ವಿಚ್ಛೇದನ ಪಡೆದುಕೊಂಡಿರುವುದಾಗಿ ಭಾವಿಸಲಾಗುತ್ತದೆ.

**ಪ್ರತಿಫಲಕ್ಕಾಗಿ ವಿವಾಹ ವಿಚ್ಛೇದನ :-** ಇದನ್ನು ಖುಲ್ ಎಂದು ಕರೆಯಲಾಗುವುದು. ಸ್ವಲ್ಪ ಪ್ರತಿಫಲ, ಎಂದರೆ ಹಣ ನೀಡಿ ಪತ್ನಿಯು ತನ್ನ ಪತಿಯಿಂದ ವಿವಾಹ ವಿಚ್ಛೇದನ ಪಡೆದುಕೊಳ್ಳಬಹುದು.

**ನ್ಯಾಯಾಲಯದ ಮೂಲಕ ವಿವಾಹ ವಿಚ್ಛೇದನ :-** ಒಬ್ಬ ಮುಸ್ಲಿಂ ಹೆಂಡತಿಯು **ಮುಸ್ಲಿಂ ವಿವಾಹಗಳ ವಿಘಟನಾ ಅಧಿನಿಯಮ, 1939** ಇದರ ಮೇರೆಗೆ ತನ್ನ ಪತಿಯಿಂದ ವಿವಾಹ ವಿಚ್ಛೇದನ ಪಡೆಯಬಹುದು. ಒಬ್ಬ ಮುಸ್ಲಿಂ ಹೆಂಗಸು ಈ ಮುಂದಿನ ಕಾರಣಗಳ ಮೇಲೆ ವಿವಾಹ ವಿಚ್ಛೇದನ ಪಡೆಯಬಹುದು.

- **ಹಿಂಸೆ :-**
  ಅದರಲ್ಲಿ ದೈಹಿಕ ಹಾಗೂ ಮಾನಸಿಕ ಹಿಂಸೆಗಳೆರಡೂ ಒಳಗೊಂಡಿರುತ್ತವೆ. ದೈಹಿಕ ಹಿಂಸೆಯೆಂದರೆ ಹೊಡೆಯುವುದು ಹಾಗೂ ದೈಹಿಕ ಚಿತ್ರಹಿಂಸೆ. ಮಾನಸಿಕ ಹಿಂಸೆಯೆಂದರೆ ನಿರಂತರವಾಗಿ ತೊಂದರೆ ಕೊಡುವುದು ಅಥವಾ ದೂಷಿಸುವುದು ಎಂದಾಗುತ್ತದೆ. ಇದರಲ್ಲಿ ಈ ಮುಂದಿನವು ಒಳಗೊಳ್ಳುತ್ತವೆ.
- ಪತಿಯು ಹೇಯ ಜೀವನ ನಡೆಸುವುದು.
- ಪತಿಯು ತನ್ನ ಪತ್ನಿಯ ಆಸ್ತಿಯನ್ನು ಮಾರುವುದು ಅಥವಾ ಆಸ್ತಿಯ ಮೇಲೆ ಅವಳ ಕಾನೂನುಬದ್ಧ ಹಕ್ಕುಗಳನ್ನು ಚಲಾಯಿಸದಂತೆ ತಡೆಯುವುದು.
- ಒಬ್ಬಳಿಗಿಂತ ಹೆಚ್ಚು ಪತ್ನಿಯರನ್ನು ಹೊಂದಿರುವಂತಹ ಸಂದರ್ಭದಲ್ಲಿ ಗಂಡನು ತನ್ನ ಎಲ್ಲಾ ಹೆಂಡತಿಯರನ್ನೂ ಒಂದೇ ರೀತಿಯಲ್ಲಿ ನಡೆಸಿಕೊಳ್ಳದಿರುವುದು; ಅಥವಾ
- ಅನೈತಿಕ ಜೀವನ ನಡೆಸುವಂತೆ ತನ್ನ ಹೆಂಡತಿಯನ್ನು ಬಲವಂತಪಡಿಸುವುದು.

ರುಕ್ಸಾನ ಖಾಲಿದನನ್ನು ವಿವಾಹವಾದಳು. ವಿವಾಹದ ನಂತರ ಖಾಲಿದ್ ಮತ್ತು ಆಕೆಯ ಅತ್ತೆ ಮಾವಂದಿರು ಸಾಕಷ್ಟು ವರದಕ್ಷಿಣೆ ತರಲಿಲ್ಲವೆಂದು ಅವಳನ್ನು ಥಳಿಸತೊಡಗಿದರು.




ಅವಳಿಗೆ ನಿರಂತರವಾಗಿ ಕಿರುಕುಳ ಕೊಡಲಾಗುತ್ತಿತ್ತು ಹಾಗೂ ಕೆಲವು ವೇಳೆ ಊಟ ಕೊಡುತ್ತಿರಲಿಲ್ಲ. ಅವಳನ್ನು ಮನೆಯ ಹೊರಗಡೆ ಹೋಗಲು ಬಿಡುತ್ತಿರಲಿಲ್ಲ ಮತ್ತು ಎಲ್ಲಾ ಮನೆಗೆಲಸಗಳನ್ನು ಅವಳೇ ಮಾಡಬೇಕಾಗಿತ್ತು. ಈ ರೀತಿಯ ಹಿಂಸೆಯನ್ನು ರುಕ್ಸಾನಳಿಗೆ ತಾಳಲಾಗಲಿಲ್ಲ. ಅವಳು ವಿವಾಹ ವಿಚ್ಛೇದನಕ್ಕಾಗಿ ನ್ಯಾಯಾಲಯದ ಮೊರೆ ಹೊಕ್ಕಳು. ಹಿಂಸೆಯ ಆಧಾರದ ಮೇಲೆ ನ್ಯಾಯಾಲಯವು ಅವಳಿಗೆ ವಿಚ್ಛೇದನ ನೀಡಿತು.

● **ನಾಲ್ಕು ವರ್ಷಗಳಿಗೂ ಹೆಚ್ಚು ಕಾಲ ಪತಿ ಪತ್ತೆಯಿಲ್ಲದಿರುವುದು :-**

ನಾಲ್ಕು ವರ್ಷಗಳಿಗೂ ಹೆಚ್ಚು ಅವಧಿ ಗಂಡನ ಇರುವಿಕೆಯ ಬಗ್ಗೆ ತಿಳಿದುಬರದಿದ್ದಲ್ಲಿ, ಒಬ್ಬ ಮುಸ್ಲಿಂ ಮಹಿಳೆಯು ವಿವಾಹ ವಿಚ್ಛೇದನ ಕೋರಬಹುದು.

ಖುರ್ಷಿದಳ ಪತಿ ಪರ್ವೀಜ್ ಕೆಲಸ ಹುಡುಕಿಕೊಂಡು ಕಲ್ಕತ್ತೆಗೆ ಹೋದ. ಖುರ್ಷಿದಳು ಅತ್ತೆ ಮಾವಂದಿರೊಂದಿಗೆ ವಾಸಿಸುತ್ತಿದ್ದಳು. ಮೂರು ತಿಂಗಳ ಕಾಲ ಅವಳಿಗೆ ಅವನಿಂದ ಪತ್ರಗಳು ಬರುತ್ತಿದ್ದವು. ಅನಂತರ ಅವನಿಂದ ಪತ್ರಗಳು ಬರುವುದು ನಿಂತುಹೋಯಿತು. ಆಕೆಯ ಭಾವ ಅವನನ್ನು ಹುಡುಕಿಕೊಂಡು ಕಲ್ಕತ್ತೆಗೆ ಹೋದ. ಆದರೆ ಅವನು ಸಿಗಲಿಲ್ಲ. ಆಕೆ ಅವನಿಗಾಗಿ ಐದು ವರ್ಷ ಕಾದಳು. ಅವಳು ಇಚ್ಛಿಸಿದಲ್ಲಿ ನ್ಯಾಯಾಲಯದಿಂದ ವಿವಾಹ ವಿಚ್ಛೇದನ ಪಡೆಯಬಹುದು ಎಂದು ಆಕೆಯ ತಂದೆ ಹೇಳಿದ. ಆಕೆ ನ್ಯಾಯಾಲಯಕ್ಕೆ ಮನವಿ ಸಲ್ಲಿಸಿ ವಿವಾಹ ವಿಚ್ಛೇದನ ಪಡೆದಳು.

● **ಎರಡು ವರ್ಷ ಅಥವಾ ಅದಕ್ಕೂ ಹೆಚ್ಚು ಅವಧಿಗೆ ಪತ್ನಿಯನ್ನು ಪೋಷಿಸಲು ತಪ್ಪುವುದು:**

ಪತಿ ಎರಡು ವರ್ಷ ಅಥವಾ ಅದಕ್ಕೂ ಮೀರಿ ತನ್ನ ಹೆಂಡತಿಯನ್ನ ಪೋಷಿಸಲು ವಿಫಲನಾದರೆ ಆಕೆ ವಿವಾಹ ವಿಚ್ಛೇದನ ಕೋರಬಹುದು.

ಫಮೀದಳ ಪತಿ ಮುಕರ್ರಮನು ಅವಳ ಖರ್ಚು ವೆಚ್ಚಗಳಿಗೆ ಯಾವುದೇ ಹಣ ನೀಡಲಿಲ್ಲ. ಫಮೀದಳು ತನ್ನ ಮಹರ್ ಅನ್ನು ಕೇಳಿದಾಗ ಆತನು ಅದನ್ನು ಆಕೆಗೆ ನೀಡಲು ನಿರಾಕರಿಸಿದ. ಆದುದರಿಂದ ಆಕೆ ಮನೆ ಬಿಟ್ಟು ತಂದೆ ಮನೆ ಸೇರಿದಳು. ಆಕೆ ಅವನನ್ನು ಜೀವನಾಂಶ ನೀಡುವಂತೆ ಕೇಳಿದಳು. ಆದರೆ ಕೊಡಲು ಆತ ನಿರಾಕರಿಸಿದ. ಮಕರ್ರಮನು



2 ವರ್ಷ ಆಕೆಗೆ ಪ್ರೋಷಣೆಗೆಂದು ಏನನ್ನೂ ನೀಡಲಿಲ್ಲ. ಅವಳು ನ್ಯಾಯಾಲಯಕ್ಕೆ ಹೋಗಿ ವಿವಾಹ ವಿಚ್ಛೇದನ ಕೋರಿದಳು. ನ್ಯಾಯಾಲಯವು ಫಮೀದಳ ಪರವಾಗಿ ವಿವಾಹ ವಿಚ್ಛೇದನದ ಡಿಕ್ರಿ ನೀಡಿತು.

**ಪತಿಗೆ ಏಳು ವರ್ಷ ಅಥವಾ ಅದಕ್ಕೂ ಹೆಚ್ಚಿನ ಅವಧಿಗೆ ಕಾರಾವಾಸ ಶಿಕ್ಷೆ ವಿಧಿಸಿದಾಗ;**

ಪತಿಗೆ ಏಳು ವರ್ಷ ಅಥವಾ ಅದಕ್ಕೂ ಹೆಚ್ಚಿನ ಅವಧಿಗೆ ಕಾರಾವಾಸ ಶಿಕ್ಷೆ ವಿಧಿಸಿದಾಗ ಪತ್ನಿಯು ವಿವಾಹ ವಿಚ್ಛೇದನ ಕೋರಬಹುದು. ಕಾರಾವಾಸ ಶಿಕ್ಷೆ ಅಂತಿಮ ಎಂದಾದಾಗ ಮಾತ್ರ ವಿವಾಹ ವಿಚ್ಛೇದನ ಡಿಕ್ರಿಯನ್ನು ನೀಡಬಹುದು.

**ಗಂಡನಿಗೆ ಕನಿಷ್ಠ 7 ವರ್ಷ ಕಾರಾವಾಸ ಶಿಕ್ಷೆ ಆದಾಗ ವಿವಾಹ ವಿಚ್ಛೇದನ ಪಡೆಯಬಹುದು**



● **ವೈವಾಹಿಕ ಹೊಣೆಗಳನ್ನು ನಿರ್ವಹಿಸುವುದರಲ್ಲಿ ವಿಫಲತೆ :**

ಯಾವುದೇ ಕಾರಣವಿಲ್ಲದೆ ಮೂರು ವರ್ಷಗಳು ಅಥವಾ ಅದಕ್ಕಿಂತಲೂ ಹೆಚ್ಚು ಅವಧಿಗೆ ಪತಿಯು ತನ್ನ ವೈವಾಹಿಕ ಹೊಣೆಗಳನ್ನು ನೆರವೇರಿಸಲು ವಿಫಲನಾದರೆ ಪತ್ನಿಯು ವಿವಾಹ ವಿಘಟನೆ ಡಿಕ್ರಿ ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆ.

● **ಪತಿಯ ಮನೋವಿಕಲತೆ**

ಗಂಡನಿಗೆ ಹುಚ್ಚು ಹಿಡಿದು 2 ವರ್ಷದ ಮೇಲೂ ಹುಚ್ಚು ಮುಂದುವರಿದರೆ, ಹೆಂಡತಿಯಾದವಳು ನ್ಯಾಯಾಲಯದಿಂದ ವಿವಾಹ ವಿಚ್ಛೇದನ ಪಡೆಯಬಹುದು. ಅದು ವಿವಾಹಕ್ಕೆ ಮೊದಲು ಅಥವಾ ವಿವಾಹದ ನಂತರ ಉಂಟಾಗಿರಬಹುದು.

● **ಪತಿಯ ನಪುಂಸಕತೆ**

ವಿವಾಹದ ಸಮಯದಲ್ಲಿ ಪತಿಯು ನಪುಂಸಕನಾಗಿದ್ದು ವಿವಾಹ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸುವವರೆಗೂ ಹಾಗೆಯೇ ಮುಂದುವರಿದಿದ್ದರೆ ಆಗ ಪತ್ನಿಯು ವಿವಾಹ ವಿಚ್ಛೇದನ ಪಡೆಯಬಹುದು.

● **ಕುಷ್ಠ**

ಪತಿಯು ಯಾವುದೇ ರೀತಿಯ ಕುಷ್ಠರೋಗದಿಂದ ನರಳುತ್ತಿದ್ದರೆ ಪತ್ನಿಯು ವಿವಾಹ ವಿಚ್ಛೇದನ ಕೋರಬಹುದು.

● **ಗುಹ್ಯರೋಗ**

ಪತಿಯು ಗುಹ್ಯರೋಗ ಹೊಂದಿದ್ದರೆ ಪತ್ನಿಯು ವಿವಾಹ ವಿಚ್ಛೇದನ ಕೋರಬಹುದು. ಕಾಯಿಲೆಯು ಸೋಂಕು ರೂಪದ್ದೆ ಆಗಿರಬೇಕಿಲ್ಲ ಆದರೆ ಉಗ್ರರೂಪದ್ದಾಗಿರಬೇಕು.

● **ಯೌವನಾವಸ್ಥೆಯ ಐಚ್ಛಿಕತೆ :**

ಒಬ್ಬ ಬಾಲಕಿಯನ್ನು ಹದಿನೈದು ವರ್ಷ ವಯಸ್ಸಾಗುವ ಮೊದಲೇ ಪೋಷಕರು ವಿವಾಹ ಮಾಡಿಸಿದ್ದು,

- ವಿವಾಹವನ್ನು ಪ್ರಸ್ತದ ಮೂಲಕ ಪೂರ್ಣಗೊಳಿಸಿರದಿದ್ದರೆ
- 18 ವರ್ಷ ವಯಸ್ಸು ಹೊಂದುವುದರೊಳಗೆ ಆಕೆಯು ವಿವಾಹವನ್ನು ನಿರಾಕರಿಸಿದ್ದರೆ ನ್ಯಾಯಾಲಯದಿಂದ ವಿವಾಹ ವಿಚ್ಛೇದನ ಕೋರಬಹುದು.

ಮುಸ್ಲಿಂ ಕಾನೂನಿನ ಮೇರೆಗೆ ಮಹಿಳೆಯು ಈ ಮುಂದಿನ ಕಾರಣಗಳಿಗಾಗಿ ಕೂಡ ವಿವಾಹ ವಿಘಟನೆ ಮಾಡಿಕೊಳ್ಳಬಹುದು.

● **ಧರ್ಮನನ್ನು ಬದಲಾಯಿಸುವುದು ಅಥವಾ ಪರಿತ್ಯಾಗ**

ಪತಿಯು ಇಸ್ಲಾಂ ಧರ್ಮವನ್ನು ಪರಿತ್ಯಾಗ ಮಾಡಿದರೆ ಕೂಡಲೇ ವಿವಾಹವು ವಿಘಟನೆಯಾಗುತ್ತದೆ. ಅಂಥ ಪರಿಸ್ಥಿತಿಯಲ್ಲಿ ಪತ್ನಿಯು ಇದ್ದತ್ ಅವಧಿ ಪೂರ್ಣಗೊಳ್ಳುವ ಮೊದಲೇ ಬೇರೊಬ್ಬ ಪುರುಷನನ್ನು ವಿವಾಹವಾದರೂ ಸಹ ಅದು ಕಾನೂನುಬದ್ಧವಾದ ವಿವಾಹವಾಗುತ್ತದೆ.

ಒಬ್ಬ ಮಹಿಳೆಯು ಇಸ್ಲಾಂ ಧರ್ಮವನ್ನು ಪರಿತ್ಯಜಿಸಿದರೆ ವಿವಾಹವು ಕೂಡಲೇ ವಿಘಟನೆಯಾಗುವುದಿಲ್ಲ. ತನ್ನ ಧರ್ಮವನ್ನು ಬದಲಿಸಿದ ನಂತರ ಕೂಡ ಆಕೆಯು ಮುಸ್ಲಿಂ ವಿವಾಹ ವಿಘಟನೆ ಅಧಿನಿಯಮ, 1939 ರಲ್ಲಿ ಹೇಳಲಾದ ಯಾವುದೇ ಒಂದು ಕಾರಣಗಳ ಮೇಲೆ ವಿವಾಹ ವಿಚ್ಛೇದನಕ್ಕೆ ಅರ್ಜಿ ಸಲ್ಲಿಸಬಹುದು.

ತಸ್ನೀಮ್ ಅಶ್ರಾಫನನ್ನು ಮದುವೆಯಾಗಿದ್ದಳು. ಅವಳ ವಿವಾಹದ 10 ವರ್ಷಗಳ ನಂತರ ಅಶ್ರಾಫ್ ಬೌದ್ಧಧರ್ಮದಿಂದ ಪ್ರಭಾವಿತನಾದ. ಆತನು ತಸ್ನೀಮಳಿಗೆ ತಾನು ತನ್ನ ಧರ್ಮವನ್ನು ಬದಲಿಸಲಿಚ್ಛಿಸುತ್ತೇನೆಂದು ಹೇಳಿದ. ಸ್ವಲ್ಪ ಸಮಯದ ನಂತರ ಅವನು ಬೌದ್ಧಧರ್ಮ ಸ್ವೀಕರಿಸಿದ.

**ಧರ್ಮ ಬದಲಾವಣೆಯಿಂದ ಅವರ ವಿವಾಹದ ಮೇಲೆ ಆಗುವ ಪರಿಣಾಮವೇನು ?**

ಅಶ್ರಾಫನು ಇಸ್ಲಾಂ ಧರ್ಮ ಬಿಟ್ಟು ಬೌದ್ಧ ಧರ್ಮವನ್ನು ಸ್ವೀಕರಿಸಿದ ಕೂಡಲೇ ಅವರ ವಿವಾಹವು ವಿಘಟನೆಗೊಂಡಿತು.

**ತಸ್ನೀಮಳು ತನ್ನ ಧರ್ಮವನ್ನು ಬದಲಿಸಿದ್ದರೆ ಆಗುತ್ತಿದ್ದ ಪರಿಣಾಮವೇನು ?**

ಆಕೆಯು ತನ್ನ ಧರ್ಮವನ್ನು ಬದಲಿಸಿದರೆ ವಿವಾಹವು ಕೂಡಲೇ ವಿಘಟನೆಗೊಳ್ಳುತ್ತಿರಲಿಲ್ಲ.

● ವ್ಯಭಿಚಾರದ ತಪ್ಪು ಆರೋಪ

ನಿಮ್ಮ ಪತಿಯು ನಿಮ್ಮ ಮೇಲೆ ವ್ಯಭಿಚಾರದ ವೃಥಾರೋಪ ಹೊರಿಸಿದರೆ ನೀವು ನಿಮ್ಮ ವಿವಾಹವನ್ನು ವಿಘಟನಗೊಳಿಸಬಹುದು.

## ದಾಂಪತ್ಯ ಹಕ್ಕುಗಳ ಪುನಃ ಸ್ಥಾಪನೆ

ವಿವಾಹವಾಯಿತೆಂದರೆ ಗಂಡಹೆಂಡಿರು ಪರಸ್ಪರ ಕೆಲವೊಂದು ಜವಾಬ್ದಾರಿಗಳಿಗೆ ಬದ್ಧರಾಗಿರಬೇಕಾಗುತ್ತದೆ. ಯಾವುದೇ ಒಂದು ಪಕ್ಷ ತನ್ನ ಜವಾಬ್ದಾರಿಗಳನ್ನು ಪೂರೆಸಲು ವಿಫಲವಾದರೆ ಇನ್ನೊಬ್ಬರು ಆ ಬಗ್ಗೆ ಕಾನೂನಿನ ನೆರವು ಪಡೆಯಬಹುದು.

ಗಂಡನು ಹೆಂಡತಿಯನ್ನು ಬಿಟ್ಟು ಬಿಡುವುದನ್ನ ಅಥವಾ ಜೀವನಕ್ಕೆ ಅವಶ್ಯವಿರುವಷ್ಟು ಹಣ ನೀಡದಿರುವುದನ್ನು ಅಥವಾ ಮಾಮೂಲಿ ಕುಟುಂಬ ಜೀವನ ನಡೆಸದಿರುವುದನ್ನು ಆಗಾಗ ನೋಡುತ್ತಿರುತ್ತೇವೆ.

ನಿಮ್ಮ ಗಂಡನು ನಿಮ್ಮನ್ನು ಪರಿತ್ಯಜಿಸಿದ್ದರೆ ಅಥವಾ ಕಾರಣವಿಲ್ಲದೆ ಕಾನೂನುಬದ್ಧವಾದ ತನ್ನ ಹೊಣೆಗಳನ್ನು ನಿರ್ವಹಿಸಲು ಉದಾಸೀನ ಮಾಡಿದರೆ ಆಗ ನೀವು ನ್ಯಾಯಾಲಯದಿಂದ ದಾಂಪತ್ಯದ ಹಕ್ಕುಗಳ ಪುನಃ ಸ್ಥಾಪನೆಗೆ ಡಿಕ್ರಿ ಪಡೆಯಬಹುದು. ಇದರ ಅರ್ಥ ತನ್ನ ಕರ್ತವ್ಯವನ್ನು ಮಾಡುವಂತೆ ನ್ಯಾಯಾಲಯ ಗಂಡನಿಗೆ ಆದೇಶಿಸುತ್ತದೆ.

ನಿಮ್ಮ ಗಂಡ ಕೂಡ ದಾಂಪತ್ಯದ ಹಕ್ಕುಗಳ ಪುನಃ ಸ್ಥಾಪನೆಗಾಗಿ ಡಿಕ್ರಿ ಕೋರಬಹುದು. ಆದಾಗ್ಯೂ ಬಲವಾದ ಕಾರಣಗಳಿದ್ದಾಗ, ಹಿಂದಿರುಗಿ ಹೋಗುವಂತೆ ಅಥವಾ ಗಂಡನೊಂದಿಗೆ ಸಂಸಾರ ಮಾಡುವಂತೆ ನ್ಯಾಯಾಲಯವು ನಿಮ್ಮನ್ನು ಬಲವಂತ ಪಡಿಸುವುದಿಲ್ಲ.

ಈ ಕಾರಣಗಳೆಂದರೆ,

- ಗಂಡ ಮತ್ತು ಅತ್ತೆ ಮಾವಂದಿರಿಂದ ಹಿಂಸೆ,
- ವೈವಾಹಿಕ ಹೊಣೆಗಳನ್ನು ನೆರವೇರಿಸುವಲ್ಲಿ ಗಂಡನ ವಿಫಲತೆ.
- ಮಹರ್ ನೀಡದಿರುವುದು.

# ಜೀವನಾಂಶ

ವಿಚ್ಛೇದನ ಪಡೆದ ಮಹಿಳೆ ಗಂಡನಿಂದ ಈ ಕೆಳಗೆ ಕಾಣಿಸಿದ ಸೌಲಭ್ಯ:

- ವಿವಾಹದ ಸಮಯದಲ್ಲಿ ಗೊತ್ತು ಪಡಿಸಲಾಗಿದ್ದ ಮಹಲ್‌ಗೆ ಸಮಾನವಾದ ಒಂದು ಮೊತ್ತ.
- ಮಕ್ಕಳಿಗೆ ಎರಡು ವರ್ಷಗಳಾಗುವವರೆಗೆ ಅವರ ಪೋಷಣೆ ವೆಚ್ಚ.
- ವಿವಾಹದ ಸಮಯದಲ್ಲಿ ಬಂದಿರುವ ಉಡುಗೊರೆಗಳು.
- ಇದ್ದತ್ ಅವಧಿಯಲ್ಲಿ ಜೀವನಾಂಶ.

ಅವಳಿಗೆ ಇವೆಲ್ಲವುಗಳನ್ನು ಕೊಡದಿದ್ದರೆ ಆಕೆಯು ಮ್ಯಾಜಿಸ್ಟ್ರೇಟ್ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದು. ಮೇಲಿನ ಸೌಲಭ್ಯಗಳನ್ನ ನೀಡುವಂತೆ ಪತಿಗೆ ದಂಡಾಧಿಕಾರಿಯು ಆದೇಶಿಸುವರು.

**ವಿವಾಹ ವಿಚ್ಛೇದನ ಹೊಂದಿದ ಮಹಿಳೆ ಜೀವನಾಂಶ ಪಡೆಯುವುದು ಹೇಗೆ ?**

ವಿಚ್ಛೇದನ ಹೊಂದಿದ ಮಹಿಳೆಯನ್ನು ಇದ್ದತ್ ಅವಧಿಯಲ್ಲಿ ಆಕೆಯ ಗಂಡನು ಪೋಷಿಸಬೇಕು.

**ಇದ್ದತ್ ಎಂದರೇನು ?**

ಇದ್ದತ್ ಅನ್ನುವುದು ವಿವಾಹ ವಿಚ್ಛೇದನ ಹೊಂದಿದ ಮಹಿಳೆಯು ಪುನರ್ವಿವಾಹವಾಗಲು ಅನುಮತಿಸದಿರುವ ಅವಧಿ. ಈ ಅವಧಿಯು

- ವಿವಾಹ ವಿಚ್ಛೇದನ ನಂತರ ಮೂರು ಮುಟ್ಟಿನ ಅವಧಿಯಾಗಿರಬಹುದು.
- ಮಹಿಳೆಯು ಮುಟ್ಟಾಗುತ್ತಿಲ್ಲ. ಆಗ ವಿವಾಹ ವಿಚ್ಛೇದನದ ನಂತರ ಮೂರು ತಿಂಗಳು.
- ಮಹಿಳೆಯು ಗರ್ಭಿಣಿಯಾಗಿದ್ದರೆ, ಹೆರಿಗೆಯಾಗುವವರೆಗಿನ ಅವಧಿ.

**ಇದ್ದತ್‌ನ ಅವಧಿಯಲ್ಲಿ ಮಹಿಳೆಯು ಎಷ್ಟು ಜೀವನಾಂಶಕ್ಕೆ ಅರ್ಹಳಾಗಿರುತ್ತಾಳೆ?**

ಆಕೆಯು, ಆಕೆಯ ಅವಶ್ಯಕತೆಗಳಿಗೆ ಅವಶ್ಯವಿರುವಷ್ಟು ಜೀವನಾಂಶ ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆ.

**ಇದ್ದತ್‌ನ ಅವಧಿಯ ನಂತರ ವಿವಾಹ ವಿಚ್ಛೇದಿದ ಮಹಿಳೆಗೆ ಯಾರು ಜೀವನಾಂಶ ನೀಡುತ್ತಾರೆ ?**

ಇದ್ದತ್ ಅವಧಿಯ ನಂತರ ವಿಚ್ಛೇದನ ಹೊಂದಿದ ಮಹಿಳೆಗೆ ಜೀವನಾಂಶ ನೀಡಲು ಈ ಮುಂದಿನ ವ್ಯಕ್ತಿಗಳಿಗೆ ಮ್ಯಾಜಿಸ್ಟ್ರೇರು ಆದೇಶಿಸಬಹುದು:

- ಅವಳ ತಂದೆತಾಯಿಗಳು ಅಥವಾ
- ಆಕೆಯ ಮಕ್ಕಳು ಅಥವಾ
- ಆಕೆಯ ಆಸ್ತಿಗೆ ವಾರಸುದಾರರಾಗಲು ಹಕ್ಕುಳ್ಳ ಸಂಬಂಧಿಗಳು ಹಾಗೂ
- ರಾಜ್ಯ ವಕ್ಫ್ ಮಂಡಲಿ

ಒಬ್ಬ ಮುಸ್ಲಿಂ ಮಹಿಳೆಯು ದಂಡ ಪ್ರಕ್ರಿಯಾ ಸಂಹಿತೆಯ 125ನೇ ಪ್ರಕರಣದ ಮೇರಗೆ ಇದ್ದತ್‌ನ ಅವಧಿಯ ನಂತರವೂ ಸಹ ತನ್ನ ಪತಿಯಿಂದ ಜೀವನಾಂಶ ಪಡೆಯಲೆಂದು ಅರ್ಜಿ ಹಾಕಬಹುದು. ಆದರೆ ಈ ಕಾನೂನಿಗೆ ಒಳಪಡುವ ಇಚ್ಛೆ ವ್ಯಕ್ತಪಡಿಸಿ ನ್ಯಾಯಾಲಯದಲ್ಲಿ ಗಂಡ ಹೆಂಡಿರಬ್ಬರೂ ಅಫಿಡವಿಟ್ ಅಥವಾ ಒಂದು ಘೋಷಣೆ ಸಲ್ಲಿಸಿದ್ದರೆ ಮಾತ್ರ ಆ ಅರ್ಜಿಯನ್ನು ಸಲ್ಲಿಸಬಹುದು. ಈ ಘೋಷಣೆಯನ್ನು ವಿವಾಹದ ಸಮಯದಲ್ಲಿ ನಿಕಾನಾಮದಲ್ಲಿ ಸೇರಿಸಬಹುದು. ಈ ಘೋಷಣೆಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದರೆ, ಪತಿಯು ಪತ್ನಿಗೆ ಪ್ರತಿ ತಿಂಗಳು ಜೀವನಾಂಶ ನೀಡಬೇಕೆಂದು ಮ್ಯಾಜಿಸ್ಟ್ರೇಟರು ಆದೇಶಿಸುತ್ತಾರೆ.

ಜೀವನಾಂಶಕ್ಕಾಗಿ **ಅರ್ಜಿಯನ್ನು** ಸಿವಿಲ್ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಇದಲ್ಲದೆ ಅಥವಾ ಇದರ ಜೊತೆಗೆ ಕ್ರಿಮಿನಲ್ ನ್ಯಾಯಾಲಯದಲ್ಲಿ ಕೂಡ **ದಂಡ ಪ್ರಕ್ರಿಯಾಸಂಹಿತೆ** 25 ನೆಯ ಪ್ರಕರಣದ ಮೇರೆಗೆ ಅರ್ಜಿ ಸಲ್ಲಿಸಬಹುದು.

ತನ್ನನ್ನು ತಾನು ಪೋಷಿಸಿಕೊಳ್ಳಲು ಸಾಧ್ಯವಾಗದಿದ್ದಲ್ಲಿ, ಒಬ್ಬ ಮಹಿಳೆ **ದಂಡ ಪ್ರಕ್ರಿಯಾ ಸಂಹಿತೆಯ 125ನೇ** ಪ್ರಕರಣದ ಮೇರೆಗೆ ಜೀವನಾಂಶಕ್ಕಾಗಿ ಅರ್ಜಿ ಸಲ್ಲಿಸಬಹುದು. ಕ್ರಿಮಿನಲ್ ನ್ಯಾಯಾಲಯದಲ್ಲಿನ ನಡಾವಳಿಗಳು ಸಿವಿಲ್ ನ್ಯಾಯಾಲಯಕ್ಕಿಂತ ಬೇಗ ನಡೆಯುತ್ತದೆ.

ಒಬ್ಬ ಮಹಿಳೆ ತನ್ನ ಪತಿ, ತನ್ನ ತಂದೆ ಅಥವಾ ತನ್ನ ಮಗನಿಂದ ಜೀವನಾಂಶ ಕೋರಬಹುದು.

ಆಕೆ ಅರ್ಜಿ ಸಲ್ಲಿಸಿದಾಗ, ನ್ಯಾಯಾಲಯವು ಅವಳಿಗೆ ಪ್ರತಿತಿಂಗಳು ಒಂದು ನಿರ್ದಿಷ್ಟ ಮೊತ್ತದ ಹಣ ನೀಡಬೇಕೆಂದು ಆದೇಶಿಸುತ್ತದೆ. ಆ ಮೊತ್ತವು ತಿಂಗಳಿಗೆ ರೂ.500 ಕ್ಕಿಂತ ಹೆಚ್ಚಿರುವಂತಿಲ್ಲ.

**ಈ ಅರ್ಜಿಯನ್ನು ಎಲ್ಲಿ ಸಲ್ಲಿಸಬೇಕು ?**

ಈ ಅರ್ಜಿಯನ್ನು ಪ್ರಥಮ ದರ್ಜೆ ಮ್ಯಾಜಿಸ್ಟ್ರೇಟರ ನ್ಯಾಯಾಲಯದಲ್ಲಿ ಸಲ್ಲಿಸಬೇಕು.



# ಮಕ್ಕಳ ಅಭಿರಕ್ಷೆ

**ವಿವಾಹ ವಿಚ್ಛೇದನದ ನಂತರ ಮಕ್ಕಳ ಗತಿಯೇನು ?**

ವಿವಾಹ ವಿಚ್ಛೇದನದ ನಂತರ ಗಂಡ ಹೆಂಡತಿಯರು ಪ್ರತ್ಯೇಕವಾಗಿ ವಾಸಿಸಲು ಪ್ರಾರಂಭಿಸುತ್ತಾರೆ. ಮಕ್ಕಳ ಸಮಸ್ಯೆ ಉದ್ಭವವಾಗುತ್ತದೆ. ಅವರು ಯಾರೊಂದಿಗೆ ವಾಸಿಸಬೇಕು ? ಅವರ ಪೋಷಣೆಗೆ ಹಣ ಕೊಡುವವರು ಯಾರು ? ಎಲ್ಲಿಯವರೆಗೆ ಕೊಡಬೇಕು ?

ಮುಸ್ಲಿಂ ಕಾನೂನಿನ ಮೇರೆಗೆ ಗಂಡ ಅಥವಾ ಹೆಂಡತಿ ಮಕ್ಕಳ ಅಭಿರಕ್ಷೆಯನ್ನು ಇತ್ಯರ್ಥಪಡಿಸಲು ಪಾಲಕರು ಮತ್ತು ಪ್ರತಿಪಾಲಿತರ ಅಧಿನಿಯಮದ ಅಡಿಯಲ್ಲಿ ಒಂದು ಅರ್ಜಿಯನ್ನು ಸಲ್ಲಿಸುವ ಮೂಲಕ ನ್ಯಾಯಾಲಯಕ್ಕೆ ಹೋಗಬೇಕಾಗುತ್ತದೆ.

**ಮಕ್ಕಳು ಯಾರ ಜೊತೆ ವಾಸಿಸಬೇಕೆಂದು ನ್ಯಾಯಾಲಯ ಹೇಗೆ ನಿರ್ಧರಿಸುತ್ತದೆ ?**

- ಮುಸ್ಲಿಂ ಕಾನೂನಿನ ಕೆಲವು ಪಂಥಗಳ ಮೇರೆಗೆ ಮಕ್ಕಳಿಗೆ ಏಳು ವರ್ಷ ವಯಸ್ಸಾಗುವವರೆಗೆ ಅವುಗಳ ಅಭಿರಕ್ಷೆ ಹೊಂದಿರಲು ತಾಯಿಯು ಹಕ್ಕುಳ್ಳವಳಾಗಿರುತ್ತಾಳೆ. ಇತರ ಪಂಥಗಳ ಮೇರೆಗೆ ಮಕ್ಕಳು ಯೌವನಾವಸ್ಥೆ ತಲುಪುವವರೆಗೆ ಅಭಿರಕ್ಷೆ ಹೊಂದಿರುವ ಹಕ್ಕು ಆಕೆಗಿರುತ್ತದೆ.
- ಎಲ್ಲಾ ಪ್ರಕರಣಗಳಲ್ಲಿಯೂ ನ್ಯಾಯಾಲಯವು ಮಗುವಿನ ಒಳಿತನ್ನು ನೋಡುತ್ತದೆ. ಎಲ್ಲಾ ಪರಿಸ್ಥಿತಿಗಳನ್ನು ಪರಿಶೀಲಿಸಿದ ನಂತರ, ನ್ಯಾಯಾಲಯವು ಮಗು ತಾಯಿಯೊಂದಿಗಿರಲೇಬೇಕೋ ಅಥವಾ ತಂದೆಯೊಂದಿಗಿರಬೇಕೋ ಎಂಬುದನ್ನು ನಿರ್ಧರಿಸುತ್ತದೆ.

**ಮಗುವಿನ ಕಲ್ಯಾಣವೆಂದರೇನು ?**

ಮಗುವಿನ ಕಲ್ಯಾಣವೆಂದರೆ, ಮಗುವಿನ ಭೌತಿಕ ಹಾಗೂ ಭಾವನಾತ್ಮಕ ಅವಶ್ಯಕತೆಗಳನ್ನು ಯಾರು ಉತ್ತಮವಾಗಿ ನೋಡಿಕೊಳ್ಳಬಲ್ಲರು ಎಂದು ಅರ್ಥ.

**ತನ್ನನ್ನು ತಾನು ಪೋಷಿಸಿಕೊಳ್ಳಲು ತಾಯಿಗೆ ಯಾವುದೇ ಮಾರ್ಗವಿಲ್ಲದಿದ್ದರೆ ಆಗ ಮಗುವನ್ನು ಆಕೆಗೆ ಕೊಡುವುದಿಲ್ಲವೇ ?**

ಮಗುವಿನ ಕಲ್ಯಾಣಕ್ಕೆ ಅವಶ್ಯವೆನಿಸಿದರೆ, ತನ್ನ ಜೀವನ ನಿರ್ವಹಣೆಗೆ ಯಾವುದೇ ಮಾರ್ಗಗಳಿಲ್ಲದಿದ್ದರೂ ಸಹ ಮಗುವನ್ನು ತಾಯಿಗೇ ನೀಡಲಾಗುವುದು. ಆಗ, ಮಕ್ಕಳು ತನ್ನೊಡನೆ ವಾಸಿಸುತ್ತಿಲ್ಲದಿದ್ದರೂ ತಂದೆಯು ಅವರ ಜೀವನ ನಿರ್ವಹಣೆಗೆ ಹಣ ನೀಡ ಬೇಕಾಗುತ್ತದೆ.

**ಬಹಳಷ್ಟು ಗಂಡಸರು ತಮ್ಮ ಹೆಂಡತಿ ಉತ್ತಮ ಚಾರಿತ್ರ್ಯದವಳಲ್ಲವೆಂದೂ, ಆದಕಾರಣ ಮಕ್ಕಳನ್ನು ಅವಳಿಗೆ ಕೊಡಬಾರದೆಂದೂ ನ್ಯಾಯಾಲಯದಲ್ಲಿ ಹೇಳುತ್ತಾರೆ. ಅವರಿಗೆ ಮಗುವನ್ನು ಕೊಡಲು**



ಅಪ್ರಾಪ್ತ ವಯಸ್ಕ ಮಗುವಿನ ಅಭಿರಕ್ಷೆಗೆ ತಾಯಿಯು ಹಕ್ಕುಳ್ಳವಳಾಗಿರುತ್ತಾಳೆ

ನ್ಯಾಯಾಲಯ ನಿರಾಕರಿಸುತ್ತದೆಯೇ ?

ಈ ಮುಂದಿನ ಕಾರಣಗಳಿಗೆ ಮಾತ್ರ ಮಗುವನ್ನು ತಾಯಿಯು ಅಭಿರಕ್ಷೆಗೆ ಕೊಡಲು ನ್ಯಾಯಾಲಯ ನಿರಾಕರಿಸುತ್ತದೆ, ಅವೆಂದರೆ-

- ತಾಯಿಯು ತುಂಬಾ ಕೆಟ್ಟ ನಡತೆಯವಳೆಂದು ಕಂಡುಬಂದರೆ. ಒಬ್ಬ ಹೆಂಗಸು ಕೆಟ್ಟ ನಡತೆಯವಳೆಂದು ಬರೇ ಹೇಳಿದರೆ ಸಾಲದು. ಆಕೆಯು ಪುರುಷರ ಸಂಗದಲ್ಲಿದ್ದರೂ ಸಹ ಆಕೆಯು ಕೆಟ್ಟ ನಡತೆಯವಳೆಂದು ಅರ್ಥವಲ್ಲ.
- ತಾಯಿಯು ಯಾವುದೇ ಮಾನಸಿಕ ಕಾಯಿಲೆ ಹೊಂದಿದ್ದು ಅದರಿಂದಾಗಿ ಮಕ್ಕಳ ಮೇಲೆ ಕೆಟ್ಟ ಪರಿಣಾಮ ಉಂಟಾಗಬಹುದೆಂದು ಕಂಡುಬಂದಲ್ಲಿ.
- ಸಾಧ್ಯವಿರುವೆಡೆಯಲ್ಲೆಲ್ಲಾ ನ್ಯಾಯಾಲಯವು ಮಗುವಿನ ಇಚ್ಛೆಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತದೆ.

# ಆಸ್ತಿಯ ಹಕ್ಕು

ಮೂಲ ಪಾಠ
ವೃಂದ ನರ‍್ರೈನ್

ಚಿತ್ರಗಳು
ಪ್ರಸನ್ನ

# ಆಸ್ತಿ ಹಕ್ಕು

ನಮ್ಮ ಕಾನೂನುಗಳು ಆಸ್ತಿಯನ್ನು ಹೊಂದುವ ಹಕ್ಕನ್ನು ನಮಗೆ ನೀಡಿವೆ. ಪುರುಷರು ಹಾಗೂ ಮಹಿಳೆಯರಿಬ್ಬರಿಗೂ ಆಸ್ತಿಯನ್ನು ಹೊಂದುವ ಹಕ್ಕಿದೆ. ಈ ಬಗ್ಗೆ ಸರ್ಕಾರವು ಕಾನೂನುಗಳನ್ನು ಮಾಡಿದ್ದು, ಅವು ಈ ರೀತಿ ಹೇಳುತ್ತವೆ.

- ಪ್ರತಿಯೊಬ್ಬ ಹೆಂಗಸು ತನ್ನ ಸ್ವಂತ ಹೆಸರಿನಲ್ಲಿ ಆಸ್ತಿಯನ್ನು ಸಂಪಾದಿಸಲು ಹಾಗೂ ಹೊಂದಿರಲು ಹಕ್ಕುಳ್ಳವಳಾಗಿದ್ದಾಳೆ.
- ಆಕೆ ತನ್ನ ಆಸ್ತಿಯನ್ನು ತನಗೆ ಇಷ್ಟಬಂದಂತೆ ಬಳಸಬಹುದು.
- ಮಹಿಳೆ ತನ್ನ ಗಳಿಕೆಯನ್ನು ತಾನೇ ತೆಗೆದುಕೊಳ್ಳಲಿಕ್ಕೆ, ಇಟ್ಟುಕೊಳ್ಳಲಿಕ್ಕೆ, ಹಾಗೂ ಬೇಕೆನಿಸಿದ ರೀತಿಯಲ್ಲಿ ಖರ್ಚು ಮಾಡಲಿಕ್ಕೆ, ಹಕ್ಕುಳ್ಳವಳಾಗಿರುತ್ತಾಳೆ.
- ಪುರುಷರಂತೆಯೇ ಆಸ್ತಿಯನ್ನು ಕೊಳ್ಳಲು ಹಾಗೂ ಮಾರಾಟ ಮಾಡಲು ಮಹಿಳೆಯೂ ಹಕ್ಕುಳ್ಳವಳಾಗಿರುತ್ತಾಳೆ.

ಮಹಿಳೆಯರಿಗೆ ತಮ್ಮ ತಂದೆ ತಾಯಿ ಅಥವಾ ಇತರ ಸಂಬಂಧಿಗಳ ಆಸ್ತಿಯಲ್ಲಿ ಸಹ ಪಾಲು ಸಿಗುತ್ತದೆ. ಅವರ ಪಾಲು ಅವರ ಜನಾಂಗದ ವೈಯಕ್ತಿಕ ಕಾನೂನುಗಳು ಅಂದರೆ ಅವರ ಧರ್ಮದ ಅನುಸಾರವಾಗಿ ರೂಪಿತವಾಗಿರುವ ಕಾನೂನುಗಳ ಮೇಲೆ ಅವಲಂಬಿಸಿರುತ್ತವೆ.

### ಆಸ್ತಿಯಲ್ಲಿ ಏನೆಲ್ಲಾ ಒಳಗೊಳ್ಳುತ್ತದೆ ?

ಮೀತಾಳ ತಂದೆ ಆಕೆಯ ಮದುವೆ ಸಮಯದಲ್ಲಿ ಕೆಲವು ಚಿನ್ನದ ಬಳೆಗಳನ್ನು ಹಾಗೂ ಹೊಲಿಗೆ ಯಂತ್ರವನ್ನು ಕೊಟ್ಟರು. ಚಿನ್ನದ ಬಳೆಗಳು ಹಾಗೂ ಹೊಲಿಗೆಯಂತ್ರ ಮೀತಾಳ ಆಸ್ತಿ.

ಅಮೀನ ಸ್ಥಳೀಯ ವ್ಯಾಪಾರಿಗೆ ಶಾಲುಗಳಿಗೆ ಕಸೂತಿಯ ಮಾಡಿ ಕೊಡುವ ಕೆಲಸಮಾಡುತ್ತಾಳೆ. ಕಸೂತಿ ಮಾಡಿದ ಪ್ರತಿಶಾಲಿಗೆ ಆ ವ್ಯಾಪಾರಿ ಅಮೀನಳಿಗೆ 50 ರೂ. ನೀಡುತ್ತಾನೆ. ಅಮೀನಾ ಗಳಿಸಿದ ಹಣ ಅವಳ ಆಸ್ತಿ.

ಜಸ್‌ಬೀರ್ ಕೌರಳ ಅಜ್ಜಿ ಆಕೆಗೆ ಒಂದಿಷ್ಟು ಕೃಷಿ ಜಮೀನು ನೀಡಿದಳು. ಆ ಜಮೀನು ಜಸ್‌ಬೀರಳ ಆಸ್ತಿ.

ಸಾರಾ ಗಿರಣಿಯಲ್ಲಿ ಕೆಲಸ ಮಾಡುತ್ತಾಳೆ. ತನ್ನ ಗಳಿಕೆಯಿಂದ ಕಾರ್ಮಿಕರ ಕಾಲೋನಿಯಲ್ಲಿ ಒಂದು ಮನೆಯನ್ನು ಕೊಂಡುಕೊಳ್ಳಲು ಆಕೆ ನಿರ್ಧರಿಸಿದಳು. ಆಕೆಯ ಪತಿ ಡೇವಿಡ್ ಕುಟುಂಬದ ಯಜಮಾನ ತಾನಾಗಿರುವುದರಿಂದ ಮನೆಯು ತನ್ನ ಹೆಸರಿನಲ್ಲಿರಬೇಕೆಂದು ಹೇಳಿದ. ಆದರೆ ತನ್ನ ಹೆಸರಿನಲ್ಲಿ ಮನೆಯನ್ನು ಹೊಂದಲು ಸಾರಾಗೆ ಹಕ್ಕಿದೆ. ಅದು ಆಕೆ ಹಾಗೂ ಆಕೆಯ ಮಕ್ಕಳಿಗೆ ಭದ್ರತೆ. ಮನೆಯು ಸಾರಾಳ ಆಸ್ತಿಯಾಗಿರುತ್ತದೆ.

ಈಗ ಆಸ್ತಿಗೆ ಸಂಬಂಧಿಸಿದ ವೈಯಕ್ತಿಕ ಕಾನೂನುಗಳನ್ನು ವಿವರವಾಗಿ ನೋಡೋಣ.

# ಮುಸ್ಲಿಂ ಮಹಿಳೆಯರ ಆಸ್ತಿ ಹಕ್ಕು

ಭಾರತದಲ್ಲಿ ಮುಸ್ಲಿಂ ಕಾನೂನು ಮುಸ್ಲಿಮರಿಗೆ ವಿವಾಹ, ವಿವಾಹ ವಿಚ್ಛೇದನ ಹಾಗೂ ಉತ್ತರಾಧಿಕಾರದಂಥ ವೈಯಕ್ತಿಕ ವಿಷಯಗಳಿಗೆ ಮಾತ್ರ ಅನ್ವಯವಾಗುತ್ತದೆ. ಭಾರತದಲ್ಲಿ ಮುಸ್ಲಿಂ ಕಾನೂನಿಗೆ ಹನಾಫಿ ಮತ್ತು ಶಿಯಾ ಎಂಬ ಎರಡು ಸ್ಥೂಲ ಪಂಥಗಳಿವೆ.

**ಸುನ್ನಿ ಮತ್ತು ಶಿಯಾ ವಾರಸುದಾರಿಕೆ ಕಾನೂನುಗಳ ನಡುವೆ ವ್ಯತ್ಯಾಸವೇನಾದರೂ ಇದೆಯೇ ?**

ಈ ಎರಡು ಪಂಥಗಳ ನಡುವೆ ಮುಖ್ಯವಾದ ವ್ಯತ್ಯಾಸವೆಂದರೆ, ಹನಾಫಿ ನಿಯಮಗಳು, ಮೃತ ವ್ಯಕ್ತಿಗೆ ಪುರುಷನ ಮೂಲಕ ಸಂಬಂಧಿಗಳಾದವರನ್ನ ಮಾತ್ರ ಉತ್ತರಾಧಿಕಾರಿಗಳೆಂದು ಲೆಕ್ಕಕ್ಕೆ ತೆಗೆದುಕೊಳ್ಳುತ್ತವೆ. ಮಗನ ಹೆಣ್ಣು ಮಕ್ಕಳು, ಮಗನ ಮಗ, ತಂದೆಯ ತಾಯಿ.

ಶಿಯಾಪಂಥ ಮೃತವ್ಯಕ್ತಿಯೊಂದಿಗೆ ಮಹಿಳೆಯರ ಮೂಲಕ ಸಂಬಂಧ ಹೊಂದಿರುವಂಥವರನ್ನೂ ಸಹ ವಾರಸುದಾರರಾಗಿ ಪರಿಗಣಿಸುತ್ತದೆ. ಉದಾ: ಮಗಳ ಮಗ, ಮಗಳ ಮಗಳು.

## ಉತ್ತರಾಧಿಕಾರ ಮತ್ತು ವಾರಸುದಾರಿಕೆ

ವಾರಸುದಾರಿಕೆಯ ಕೆಲವು ಪ್ರಮುಖ ನಿಯಮಗಳು ಇಂತಿವೆ:-

- ಆಸ್ತಿಯನ್ನು ಕ್ಲೇಮು ಮಾಡುವ ಎಲ್ಲಾ ವಾರಸುದಾರರೂ ಮೃತರಿಗೆ ಸಮಾನವಾಗಿ ಸಂಬಂಧ ಹೊಂದಿದ್ದರೆ ಅವರೆಲ್ಲರಿಗೂ ಆಸ್ತಿಯಲ್ಲಿ ಸಮಾನ ಹಕ್ಕಿದೆ.
- ಪುರುಷನು ಮಹಿಳೆಯ ಪಾಲಿನ ಎರಡು ಪಟ್ಟು ಪಡೆಯುತ್ತಾನೆ.
- ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿಯ ಮೂಲಕ ಮೃತನಿಗೆ ಸಂಬಂಧಿಯಾಗಿದ್ದರೆ ಆ ವ್ಯಕ್ತಿಯು ಜೀವಂತವಾಗಿರುವವರೆಗೆ ಸದರಿ ವ್ಯಕ್ತಿಗೆ ವಾರಸುದಾರಿಕೆ ಬರುವುದಿಲ್ಲ.
- ಹತ್ತಿರದ ಸಂಬಂಧಿ ದೂರದ ಸಂಬಂಧಿಯನ್ನು ಹೊರತುಪಡಿಸುತ್ತಾನೆ.

**ನೆನಪಿನಲ್ಲಿಡಿ:-** ವಾರಸುದಾರಿಕೆ, ಜೀವನಾಂಶ ಮತ್ತು ಮಹರ್‌ನಲ್ಲಿ ಒಬ್ಬ ಮಹಿಳೆಗೆ ಕೆಲವು ಹಕ್ಕುಗಳಿವೆ. ಆಕೆ

- ಮಗಳಾಗಿ
- ವಿಧವೆಯಾಗಿ
- ಅಜ್ಜಿಯಾಗಿ
- ತಾಯಿಯಾಗಿ
- ಮಗನ ಮಗಳಾಗಿ - ವಾರಸುದಾರಿಕೆಗೆ ಅರ್ಹಳಾಗುತ್ತಾಳೆ.

ಹೆಂಗಸಿಗೆ
ಆಸ್ತಿಯಲ್ಲಿ
ಗಂಡಸಿನ
ಅರ್ಧ ಭಾಗ
ಸಿಕ್ಕುತ್ತದೆ

ಮಗಳು
ವಿಧವೆ
ತಾಯಿ
ಅಜ್ಜಿ
ಮೊಮ್ಮಗಳು

ವಾರಸುದಾರನಿಗೆ ಮೃತನೊಂದಿಗೆ ಇರುವ ಸಂಬಂಧದ ಅನುಸಾರವಾಗಿ ಆಸ್ತಿಯನ್ನು ಹಂಚಲಾಗುತ್ತದೆ. ಮತ್ತು ವಾರಸುದಾರರ ಸಂಖ್ಯೆಯ ಮೇಲೆ ಹಾಗೂ ಆತನ ಸಂಬಂಧದ ದೂರಕ್ಕೆ ಅನುಗುಣವಾಗಿ ಬರುವ ಪಾಲು ಅವಲಂಬಿತವಾಗಿರುತ್ತದೆ.

**ವಿಧವೆ:**

**ಆಕೆಯ ಗಂಡನ ಆಸ್ತಿಯಲ್ಲಿ ಆಕೆಯ ಪಾಲೆಷ್ಟು ?**

ಮಕ್ಕಳಿದ್ದಾಗ ಗಂಡನ ಆಸ್ತಿಯ 1/8 ಪಾಲನ್ನು ಪಡೆಯುತ್ತಾಳೆ ಹಾಗೂ ಮಕ್ಕಳಿಲ್ಲದಿದ್ದಾಗ 1/4 ಪಾಲು ದೊರೆಯುತ್ತದೆ.

**ತಮ್ಮ ಗಂಡನ ಆಸ್ತಿಯಲ್ಲಿ ಇಬ್ಬರು ಅಥವಾ ಅದಕ್ಕೂ ಹೆಚ್ಚು ವಿಧವೆಯರ ಪಾಲೆಷ್ಟು ?**

ಮಕ್ಕಳಿದ್ದಾಗ ಇಬ್ಬರು ಅಥವಾ ಅದಕ್ಕೂ ಹೆಚ್ಚು ವಿಧವೆಯರು ಒಟ್ಟಾಗಿ ಗಂಡನ ಆಸ್ತಿಯ 1/8 ಪಾಲನ್ನು ಪಡೆಯುತ್ತಾರೆ ಹಾಗೂ ಮಕ್ಕಳಿಲ್ಲದಿದ್ದಾಗ ಒಟ್ಟಾಗಿ 1/4 ಪಾಲು ಪಡೆಯುತ್ತಾರೆ.

> ಖಾಲಿದ್‌ನಿಗೆ ಮೂರು ಜನ ಪತ್ನಿಯರಿದ್ದರು. ಅವನು ಮೂರು ಜನ ವಿಧವೆಯರು ಹಾಗೂ ಒಬ್ಬ ಮಗನನ್ನು ಬಿಟ್ಟು ಸತ್ತ. ಅವನು ರೂ. 80000-00 ಮೌಲ್ಯದ ಆಸ್ತಿ ಬಿಟ್ಟು ಹೋಗಿದ್ದ. ಮೂರು ಜನ ವಿಧವೆಯರು ಒಟ್ಟಿಗೆ ಖಾಲಿದ್‌ನು ಬಿಟ್ಟು ಹೋಗಿರುವ ಆಸ್ತಿಯಲ್ಲಿ 1/8 ಪಾಲನ್ನು ಪಡೆಯುತ್ತಾರೆ. ಅದರಲ್ಲಿ ಪ್ರತಿಯೊಬ್ಬ ವಿಧವೆಯೂ ಸಮಾನ ಪಾಲನ್ನು ಪಡೆಯುತ್ತಾಳೆ.

ಖಾಲಿದನು ಮೃತನಾಗುವ ಸಮಯದಲ್ಲಿ ಅವನಿಗೆ ಮಗು ಇಲ್ಲದಿದ್ದಲ್ಲಿ ಆಗ ಮೂವರು ವಿಧವೆಯರು, ಒಟ್ಟು ಆಸ್ತಿಯ 1/4 ಪಾಲಿಗೆ ಹಕ್ಕುಳ್ಳವರಾಗುತ್ತಿದ್ದು, ಅದನ್ನು ತಮ್ಮೊಳಗೆ ಸಮಾನವಾಗಿ ಹಂಚಿಕೊಳ್ಳುವರು.

**ಮಗಳು:**

**ತಂದೆಯ ಆಸ್ತಿಯಲ್ಲಿ ಮಗಳ ಪಾಲೇನು ?**

ಆಕೆಗೆ ಸಹೋದರ ಇಲ್ಲದಿದ್ದರೆ ಅರ್ಧ ಪಾಲು ಬರುತ್ತದೆ. ಆಕೆಗೆ ಸಹೋದರ ಇದ್ದರೆ ಸಹೋದರನಿಗೆ ಬರುವುದರಲ್ಲಿ ಅರ್ಧಪಾಲು ಬರುತ್ತದೆ.

> ಅಬ್ದುಲ್ಲಾ ಸಾಬಾಳನ್ನು ಮದುವೆಯಾಗಿದ್ದ. ಮಗ ಸಮೀರ್ ಮತ್ತು ಮಗಳು ಇರಾಮ್‌ಳನ್ನು ಬಿಟ್ಟು ಅವನು ಮೃತನಾದ. ಹೆಂಡತಿ ಸಾಬಾ ಆ ಮೊದಲೇ ತೀರಿಕೊಂಡಿದ್ದಳು. ಆತನು ರೂ. 90,000-00 ಬೆಲೆಯ ಆಸ್ತಿ ಬಿಟ್ಟುಹೋಗಿದ್ದನು.

ಇರಾಮಳು ಸಮೀರನಿಗೆ ಬರುವ ಪಾಲಿನ ಅರ್ಧದಷ್ಟನ್ನು ಪಡೆಯುತ್ತಾಳೆ.

**ನೆನಪಿನಲ್ಲಿಡಿ:-** ಪುರುಷನು ಮಹಿಳೆಯ ಎರಡು ಪಟ್ಟು ಪಾಲು ಪಡೆಯುತ್ತಾನೆ.

ಅಬ್ದುಲ್ಲನಿಗೆ ಒಬ್ಬಳೇ ಮಗಳಿದ್ದು ಮಗ ಇಲ್ಲದಿದ್ದರೆ ಇರಾಮಳಿಗೆ ಅಬ್ದುಲ್ಲಾನ ಆಸ್ತಿಯಲ್ಲಿ ಅರ್ಧದಷ್ಟು ಸಿಗುತ್ತಿತ್ತು.

**ತಾಯಿ**

**ತನ್ನ ಮಗನ ಆಸ್ತಿಯಲ್ಲಿ ಆಕೆಯ ಪಾಲೆಷ್ಟು ?**

ಮಕ್ಕಳಿಲ್ಲದಿದ್ದಾಗ ತನ್ನ ಮಗನ ಆಸ್ತಿಯ 1/3 ಪಾಲು ಅವಳಿಗೆ ಸಿಗುತ್ತದೆ. ಮಕ್ಕಳಿದ್ದರೆ 1/6 ರಷ್ಟು ಸಿಗುತ್ತದೆ.

> ಷೇರಿಯತ್ ಕಾನೂನಿನ ಪ್ರಕಾರ 1955ರಲ್ಲಿ ಅಶ್ರಾಫನು ಮುಷರಫಳನ್ನು ಮದುವೆಯಾದ. ಆತನು 1975ರಲ್ಲಿ ಸತ್ತಾಗ ತನ್ನ ಹೆಂಡತಿ ಮುಷರಫಳನ್ನ, ತಾಯಿ ಜುಬೇದ, ಮಗಳು ತನ್ನಿಂ ಮತ್ತು ಮೊದಲೇ ಸತ್ತಿದ್ದ ಮಗನ ಇಬ್ಬರು ಹೆಣ್ಣುಮಕ್ಕಳು ರುಕ್ಸಾನಾ ಮತ್ತು ರೆಹನಾ, ಇವರನ್ನು ಬಿಟ್ಟು ಹೋಗಿದ್ದ. ಅವನು ಸತ್ತಾಗ ಅವನ ಹೆಸರಿನಲ್ಲಿ 1,80,000 ರೂ. ಬೆಲೆಯ ಆಸ್ತಿ ಇತ್ತು. ಹಂಚಿಕೆಯ ವಿಷಯದಲ್ಲಿ ಕುಟುಂಬದ ಸದಸ್ಯರಲ್ಲಿ ವಿವಾದ ಉಂಟಾಯಿತು. ವಿಷಯವನ್ನು ನ್ಯಾಯಾಲಯಕ್ಕೆ ಒಪ್ಪಿಸಲಾಯಿತು ಹಾಗೂ ನ್ಯಾಯಾಲಯವು ಈ ಮುಂದಿನಂತೆ ನಿರ್ಣಯ ನೀಡಿತು.

- ತಾಯಿ ಜುಬೇದಳು ಒಟ್ಟು ಆಸ್ತಿಯ 1:6 ಭಾಗ ಪಡೆಯುತ್ತಾಳೆ.
- ಸಹೋದರರು ಇಲ್ಲದಿರುವುದರಿಂದ ತನ್ನೀಮಳು ಒಟ್ಟು ಆಸ್ತಿಯ ಅರ್ಧದಷ್ಟನ್ನು ಪಡೆಯುತ್ತಾಳೆ.
- ಅಶ್ರಾಫನ ವಿಧವೆಯಾದ ಮುಶ್ರಾಫಳು ಒಟ್ಟು ಆಸ್ತಿಯ 1:6 ಭಾಗ ಪಡೆಯುತ್ತಾಳೆ.
- ಮೊಮ್ಮಕ್ಕಳಾದ ರುಕ್ಸಾನ ಮತ್ತು ರೆಹನಾ ಒಟ್ಟಿಗೆ ಒಟ್ಟು ಆಸ್ತಿಯ 1:6 ಭಾಗ ಪಡೆಯಲಿದ್ದು ಅದನ್ನು ಅವರಿಬ್ಬರೂ ಸಮಾನವಾಗಿ ಹಂಚಿಕೊಳ್ಳಬೇಕು.

**ಅಜ್ಜಿ**

**ಮೊಮ್ಮಗನ ಆಸ್ತಿಯಲ್ಲಿ ಆಕೆಯಪಾಲೆಷ್ಟು ?**

ತಾಯಿ ಅಥವಾ ಅಜ್ಜ ಇಲ್ಲದಿದ್ದಾಗ ತಾಯಿ ಕಡೆಯ ಅಜ್ಜಿಯು ಒಟ್ಟು ಆಸ್ತಿಯ 1:6 ಭಾಗವನ್ನು ಪಡೆಯುತ್ತಾಳೆ.

ತಂದೆ ಅಥವಾ ಅಜ್ಜ ಇಲ್ಲದಿದ್ದಾಗ ಮಾತ್ರ ತಂದೆ ಕಡೆಯ ಅಜ್ಜಿಯು ಆಸ್ತಿಯಲ್ಲಿ ಪಾಲನ್ನು ಪಡೆಯುತ್ತಾಳೆ.

# ವಧುದಕ್ಷಿಣೆ ಅಥವಾ ಮಹರ್

**ವಧುದಕ್ಷಿಣೆ ಅಥವಾ ಮಹರ್ ಎಂದರೇನು ?**

ವಿವಾಹದ ಸಮಯದಲ್ಲಿ ಗಂಡನಿಂದ ಹೆಂಡತಿ ಪಡೆಯಲು ಹಕ್ಕುಳ್ಳ ಒಂದು ಹಣದ ಮೊತ್ತ ಅಥವಾ ಇತರ ಯಾವುದೇ ಆಸ್ತಿ. ಅದು ವಿವಾಹದ ಒಂದು ಅವಿಭಾಜ್ಯ ಅಂಗ.

**ಮಹರ್ ಮೊತ್ತವನ್ನು ಯಾವಾಗ ನಿಗದಿಪಡಿಸಲಾಗುತ್ತದೆ ?**

ಅದನ್ನು ವಿವಾಹದ ಮೊದಲು ಯಾವಾಗಲಾದರೂ ಅಥವಾ ವಿವಾಹದ ಸಮಯದಲ್ಲಿ ನಿಗದಿಪಡಿಸಬಹುದು. ವಿವಾಹದ ನಂತರ ಅದನ್ನು ಹೆಚ್ಚಿಸಬಹುದು. ವಿವಾಹದ ನಂತರ ಮಹರ್ ಅನ್ನು ಬಿಟ್ಟು ಕೊಡಬಹುದು.

**ಮಹರ್‌ನಲ್ಲಿ ಎಷ್ಟು ವಿಧ ?**

ಎರಡು ರೀತಿಯ ಮಹರ್‌ಗಳಿವೆ.

1. ತ್ವರಿತದ್ದು ಮತ್ತು 2. ಮುಂದೂಡಲಾದದ್ದು

ತ್ವರಿತ ಮಹರ್ ಎಂದರೆ ವಿವಾಹವಾದ ಕೂಡಲೇ ನೀಡಲಾಗುವ ಹಣ. ಪತ್ನಿಯು ವಿವಾಹವಾದ ಸಮಯದಲ್ಲಿ ಅಥವಾ ವಿವಾಹದ ಅವಧಿಯಲ್ಲಿ ಯಾವ ವೇಳೆಯಲ್ಲಾದರೂ ಅದನ್ನು ಕೇಳಬಹುದು.

ಮುಂದೂಡಲಾದ ಮಹರ್ ಆಕೆಯ ಗಂಡನ ಸಾವಿನಿಂದ ಅಥವಾ ವಿವಾಹ ವಿಚ್ಛೇದನದ ಮೂಲಕ ಆಕೆಗೆ ಸಿಕ್ಕಲಿರುವ ಹಣ.

**ಕಾನೂನಿನಲ್ಲಿ ಮಹರ್‌ಗೆ ಯಾವುದೇ ಮಿತಿಯನ್ನು ನಿಗದಿಪಡಿಸಲಾಗಿದೆಯೇ ?**

ಇಲ್ಲ, ಮಹರ್‌ಗೆ ಯಾವುದೇ ಗರಿಷ್ಠ ಮಿತಿಯನ್ನು ನಿಗದಿಪಡಿಸಿಲ್ಲ. ಗಂಡ ತನಗೆ ಇಷ್ಟಬಂದಷ್ಟು ಹಣವನ್ನು ಹೆಂಡತಿಗೆ ನೀಡಬಹುದು.

ಸುನ್ನಿ ಕಾನೂನಿನ ಪ್ರಕಾರ ಗಂಡ 10 ದಿನಾರ್‌ಗಿಂತ ಕಡಿಮೆ ಕೊಡುವಂತಿಲ್ಲ. ಶಿಯಾ ಕಾನೂನಿನಲ್ಲಿ ಯಾವುದೇ ಕನಿಷ್ಠ ಮೊತ್ತ ನಿಗದಿಪಡಿಸಿಲ್ಲ.

**ಪತಿಯು ಅಪ್ರಾಪ್ತ ವಯಸ್ಕನಾಗಿದ್ದ ಸಂದರ್ಭದಲ್ಲಿ ತಂದೆಯು ಒಂದು ನಿರ್ದಿಷ್ಟ ಮೊತ್ತವನ್ನು ಮಹರ್ ಎಂದು ಗೊತ್ತುಪಡಿಸಿದರೆ ಏನಾಗುತ್ತದೆ?**

ಸುನ್ನಿಗಳಲ್ಲಿ ತಂದೆಯಿಂದ ಗೊತ್ತುಪಡಿಸಲಾದ ಮಹರ್‌ಗೆ ಮಗ ಬದ್ಧನಾಗಿರುತ್ತಾನೆ. ಆದರೆ ಶಿಯಾಗಳಲ್ಲಿ ಮಹರ್ ಅನ್ನು ನೀಡಲು ಮಗನಿಗೆ ಯಾವುದೇ ಆದಾಯ ಇಲ್ಲದಿದ್ದರೆ ಆಗ ತಂದೆಯು ಅದನ್ನು ನೀಡಬೇಕು.




**ಮಹರ್ ಸಂದಾಯ ಮಾಡದಿದ್ದಾಗ ಪರಿಹಾರವೇನು ?**

ಮಹರ್ ಗಂಡ ಹೆಂಡತಿಗೆ ನೀಡಬೇಕಾದ ಸಾಲ ಎನ್ನಬಹುದು. ಅದನ್ನು ನೀಡದಿದ್ದರೆ ಆಕೆ ಅದಕ್ಕಾಗಿ ನ್ಯಾಯಾಲಯಕ್ಕೆ ಹೋಗಬಹುದು. ಹೆಂಡತಿಯ ಮರಣದ ನಂತರವೂ ಸಹ ಆಕೆಯ ಮಹರ್ ಅನ್ನು ನೀಡಿರದಿದ್ದರೆ ಆಕೆಯ ವಾರಸುದಾರರು ಅದಕ್ಕಾಗಿ ನ್ಯಾಯಾಲಯಕ್ಕೆ ಹೋಗಬಹುದು.

**ಪತಿಯು ಮೃತನಾದಾಗ ಆತ ಪತ್ನಿಗೆ ನೀಡಬೇಕಾದ ಮಹರ್‌ನ ಸಂದಾಯದ ಬಗೆ?**

ಆಕೆಯ ಮಹರ್ ಅನ್ನು ಆಕೆಯ ಪತಿಯ ಆಸ್ತಿಯಿಂದ ನೀಡಬೇಕು. ವಿಧವೆ ಅಥವಾ ವಿವಾಹ ವಿಚ್ಛೇದಿತಳು ಪತಿಯ ಆಸ್ತಿಯನ್ನು ಸ್ವಾಧೀನಕ್ಕೆ ತೆಗೆದುಕೊಂಡು, ಅವಳ ಮಹರ್ ಸಂದಾಯವಾಗುವವರೆಗೆ ತನ್ನ ಬಳಿ ಇಟ್ಟುಕೊಳ್ಳಬಹುದು. ಇದನ್ನು ಪ್ರತಿಧಾರಣ ಅಧಿಕಾರ ಎಂಬುದಾಗಿ ಕರೆಯಲಾಗುತ್ತದೆ.

**ತನ್ನ ಪತಿಯ ಆಸ್ತಿಯ ಸ್ವಾಧೀನತೆಯನ್ನು ಪಡೆದುಕೊಂಡಿರುವ ಅಥವಾ ಪ್ರತಿಧಾರಣ ಮಾಡಿರುವ ವಿಧವೆಯ ಹಕ್ಕುಗಳು ಮತ್ತು ಕರ್ತವ್ಯಗಳೇನು?**

- ಆಕೆಯು ಎಸ್ಟೇಟಿನ ಎಲ್ಲಾ ಆದಾಯ ಮತ್ತು ಲಾಭಗಳ ಪೂರ್ಣ ಲೆಕ್ಕಪತ್ರಗಳನ್ನು ನೀಡಬೇಕು.
- ಆಕೆಯು ಆಸ್ತಿಯನ್ನು ಮಾರುವಂತಿಲ್ಲ ಅಥವಾ ದಾನ ಮಾಡುವಂತಿಲ್ಲ.
- ಮಹರ್ ಸಾಲದ ವಸೂಲಿಗಾಗಿ ಆಕೆಯು ದಾವೆ ಹೂಡಬಹುದು.
- ಆಕೆಯು ಆಸ್ತಿಯ ಬಾಡಿಗೆಗಳು ಮತ್ತು ಲಾಭಗಳಿಂದ ತನ್ನ ಮಹರ್ ಸಾಲವನ್ನು ತೀರಿಸಿ ಕೊಳ್ಳಬಹುದು.



**ಮಹರ್ ನೀಡದಿದ್ದಾಗ ಪತ್ನಿಯ ಇತರ ಹಕ್ಕುಗಳೇನು ?**

- ತ್ವರಿತ ಮಹರ್ ನೀಡದಿದ್ದಾಗ ಹೆಂಡತಿಯು ಗಂಡನಿಗೆ ವೈವಾಹಿಕ ಹಕ್ಕುಗಳನ್ನು ನಿರಾಕರಿಸಬಹುದು.
- ತ್ವರಿತ ಮಹರ್ ನೀಡದ ಕಾರಣದಿಂದಾಗಿ ಪತ್ನಿಯು ತನ್ನ ಪತಿಯಿಂದ ಪ್ರತ್ಯೇಕವಾಗಿ ವಾಸಿಸುತ್ತಿದ್ದಾಗ ಆಕೆಯನ್ನು ಪೋಷಿಸಲು ಆತ ಬದ್ಧನಾಗಿರುತ್ತಾನೆ.

## ಜೀವನಾಂಶ ಅಥವಾ ನಫಾಕಾ

ಜೀವನಾಂಶವು ಗಂಡನು, ತನ್ನ ಹೆಂಡತಿಗೆ, ಮಕ್ಕಳಿಗೆ, ಆಹಾರ ಬಟ್ಟೆ ಬರೆ ಮತ್ತು ವಸತಿಗೆ ಖರ್ಚು ಮಾಡುವ ಹಣವಾಗಿರುತ್ತದೆ. ಹೆಂಡತಿಯನ್ನು ಪೋಷಿಸುವುದು ಗಂಡನ ಕಾನೂನುಬದ್ಧ ಕರ್ತವ್ಯ. ಆತನು ಆಕೆಯನ್ನು ಪೋಷಿಸದಿದ್ದರೆ ಆಕೆಯು ದಂಡ ಪ್ರಕ್ರಿಯಾ ಸಂಹಿತೆಯ 125ನೇ ಪ್ರಕರಣದ ಮೇರೆಗೆ ಜೀವನಾಂಶಕ್ಕೆ ಅರ್ಜಿ ಸಲ್ಲಿಸಬಹುದು.

**ಜೀವನಾಂಶ ಮೊತ್ತವನ್ನು ಹೇಗೆಗೊತ್ತುಪಡಿಸಲಾಗುತ್ತದೆ ?**

ಮೊತ್ತವನ್ನು ನ್ಯಾಯಾಲಯವು ಗೊತ್ತುಪಡಿಸುತ್ತದೆ ಹಾಗೂ ಅದು ಪತಿಯ ಆದಾಯ, ಪತ್ನಿಯ ಅಗತ್ಯತೆಗಳು ಮತ್ತು ಆಕೆಯ ಜೀವನಮಟ್ಟದ ಮೇಲೆ ಅವಲಂಬಿತವಾಗಿರುತ್ತದೆ.



# ಉಯಿಲು ಅಥವಾ ವಾಸಿಯಾತ್

## ಉಯಿಲು ಅಥವಾ ವಾಸಿಯಾತ್ ಎಂದರೇನು ?

ತನ್ನ ಮರಣದ ನಂತರ ಆಸ್ತಿಯನ್ನು ಅಥವಾ ಹಣವನ್ನು ಒಬ್ಬ ನಿರ್ದಿಷ್ಟ ವ್ಯಕ್ತಿಗೆ ನೀಡಿರುವುದಾಗಿ ಸೂಚಿಸಿ ಮಾಡಲಾದ ಮರಣಶಾಸನವೇ ವಾಸಿಯಾತ್.

## ಒಬ್ಬ ಮುಸ್ಲಿಮನು ಆಕೆ ಆತನ ಎಷ್ಟು ಪಾಲು ಆಸ್ತಿಯನ್ನು ಉಯಿಲು ಮಾಡಬಹುದು ?

ಒಬ್ಬ ಮುಸ್ಲಿಮನು ತನ್ನ ಒಟ್ಟು ಆಸ್ತಿಯ 1:3 ಭಾಗಕ್ಕಿಂತ ಹೆಚ್ಚು ಉಯಿಲು ಮಾಡುವಂತಿಲ್ಲ. ಆದರೆ ಒಬ್ಬ ಮಹಿಳೆಯು ಯಾವುದೇ ರಕ್ತಸಂಬಂಧಿಗಳನ್ನು ಹೊಂದಿಲ್ಲದಿದ್ದಾಗ ಆಕೆಯ ಪತಿಯೊಬ್ಬನೇ ವಾರಸುದಾರನಾಗುತ್ತಾನೆ. ಆಗ ಆಕೆಯು ತನ್ನ ಆಸ್ತಿಯ 2:3 ಭಾಗವನ್ನು ಅವನಿಗೆ ಉಯಿಲು ಮಾಡಿಕೊಡಬಹುದು.

ಈ ಮೊತ್ತವನ್ನು ಅಂತ್ಯ ಸಂಸ್ಕಾರದ ವೆಚ್ಚಗಳು ಮತ್ತು ಸಾಲಗಳನ್ನು ಸಂದಾಯ ಮಾಡಿದ ನಂತರ ಲೆಕ್ಕ ಹಾಕಲಾಗುತ್ತದೆ.



**ವಾರಸುದಾರರು ಸಮ್ಮತಿಸಿದರೆ ಒಬ್ಬ ಮುಸ್ಲಿಂ ಮಹಿಳೆ ಆಸ್ತಿಯ 1:3 ಭಾಗಕ್ಕಿಂತ ಹೆಚ್ಚು ಉಯಿಲು ಮಾಡಬಹುದೇ ?**

ಹೌದು. ಆಕೆ ಹಾಗೆ ಮಾಡಬಹುದು.

ಮುಸ್ಲಿಂ ಹೆಂಡತಿ ಅಥವಾ ಗಂಡ ತಮ್ಮ ವಿವಾಹವನ್ನು ವಿಶೇಷ ವಿವಾಹಗಳ ಅಧಿನಿಯಮದ ಮೇರೆಗೆ ನೋಂದಾಯಿಸಿದ್ದರೆ ಆಗ ಮುಸ್ಲಿಂ ಉತ್ತರಾಧಿಕಾರ ಅಧಿನಿಯಮವು ಅವರಿಗೆ ಅನ್ವಯವಾಗುವುದಿಲ್ಲ, ಆದರೆ ಭಾರತೀಯ ಉತ್ತರಾಧಿಕಾರ ಅಧಿನಿಯಮವು ಅನ್ವಯವಾಗುತ್ತದೆ. ಈ ಅಧಿನಿಯಮದ ಮೇರೆಗೆ ಆಕೆಯು ತನ್ನ ಪೂರ್ತಾ ಆಸ್ತಿಯನ್ನು ತನಗೆ ಬೇಕಾದ ಯಾರಿಗಾದರೂ ಉಯಿಲು ಮಾಡಬಹುದು.

## ದಾನ ಅಥವಾ ಹಿಬಾ

**ದಾನ ಅಥವಾ ಹಿಬಾ ಎಂದರೇನು ?**

ಒಂದು ನಿರ್ದಿಷ್ಟ ಆಸ್ತಿ ವಸ್ತು ಅಥವಾ ಹಣವನ್ನು ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಗೆ ಕೊಟ್ಟಾಗ ಆತ ಅದನ್ನ ಒಪ್ಪಿಕೊಂಡಾಗ ದಾನ ಅಥವಾ ಹಿಬಾ ಆಗುತ್ತದೆ. ಹಿಬಾ, ಪ್ರತಿಫಲಾಪೇಕ್ಷೆ ಇಲ್ಲದೆ ಮಾಡಿದ ದಾನವಾಗಿರುತ್ತದೆ.

**ಯಾರು ಹಿಬಾ ಮಾಡಬಹುದು ?**

ಪ್ರಾಪ್ತ ವಯಸ್ಕರಾದ ಸ್ವಸ್ತ ಮನಸ್ಸಿನ, ಯಾರೇ ಮುಸ್ಲಿಂ ಹೆಂಗಸು ಅಥವಾ ಗಂಡಸು ದಾನ ಮಾಡಬಹುದು. ದಾನವನ್ನು ಯಾವುದೇ ಒತ್ತಡಕ್ಕೆ ಮಣಿಯದೆ, ಮೋಸವಿಲ್ಲದೆ ಮಾಡಿರಬೇಕು. ಒಬ್ಬ ಪರ್ದಾನಶೀನ್ ಹೆಂಗಸು ದಾನ ಮಾಡಿದಾಗ ಸ್ವಇಚ್ಚೆಯಿಂದ ಮತ್ತು ಯಾವುದೇ ಒತ್ತಡವಿಲ್ಲದೆ ದಾನ ಮಾಡಿದ್ದಾಳೆ ಎಂಬ ಬಗ್ಗೆ ರುಜುವಾತು ಪಡಿಸಬೇಕು.

**ದಾನವಾಗಿ ಏನೇನನ್ನು ಕೊಡಬಹುದು ?**

ಎಲ್ಲಾ ರೀತಿಯ ಆಸ್ತಿಯನ್ನು ದಾನವಾಗಿ ನೀಡಬಹುದು.

**ಕಾನೂನುಬದ್ಧ ದಾನದ ಷರತ್ತುಗಳೇನು ?**

ದಾನವು ಮಾನ್ಯವಾದದ್ದಾಗಬೇಕಾದರೆ,

- ದಾನ ಮಾಡುವ ಬಗ್ಗೆ ಇಚ್ಚೆಯನ್ನು ಘೋಷಿಸಿರಬೇಕು.
- ದಾನವನ್ನು ಅಂಗೀಕರಿಸಿರಬೇಕು
- ದಾನವನ್ನು ಇತರ ವ್ಯಕ್ತಿಗೆ ನೀಡಿರಬೇಕು.

**ತಾವಿಬ್ಬರೂ ವಾಸಿಸುತ್ತಿರುವ ಒಂದು ಮನೆಯನ್ನು ಪತಿಯು ತನ್ನ ಪತ್ನಿಗೆ ದಾನ ಮಾಡಬಹುದೇ ?**

ಪತಿ ಪತ್ನಿಯರಿಬ್ಬರೂ ಒಂದೇ ಮನೆಯಲ್ಲಿ ವಾಸಿಸುತ್ತಿದ್ದು, ಆ ಮನೆಯಲ್ಲಿ ವಾಸಿಸುತ್ತಿರುವಾಗಲೇ ಪತ್ನಿಗೆ ದಾನ ಮಾಡಿದರೆ ಅದೂ ಕೂಡಾ ಮಾನ್ಯವಾದ ದಾನವಾಗುತ್ತದೆ.

ಉದಾಹರಣೆಗೆ ಪತಿಯು ತನ್ನ ಪತ್ನಿಗೆ ಮನೆ ದಾನ ಮಾಡಿ ಅದರ ಬೀಗದ ಕೈಗಳನ್ನು ಆಕೆಗೆ ಕೊಡುತ್ತಾನೆ. ಇದು ಮಾನ್ಯವಾದ ದಾನವೇ.

**ದಾನಪತ್ರವು ಲಿಖಿತರೂಪದಲ್ಲಿರುವುದು ಅವಶ್ಯವೇ ?**

ಇಲ್ಲ. ಅದರ ಅವಶ್ಯಕತೆ ಇಲ್ಲ. ಷರತ್ತುಗಳನ್ನು ಪೂರೈಸಿದ್ದರೆ ದಾನವು ಮಾನ್ಯವಾಗುತ್ತದೆ.

**ತಾಯಿಯು ತನ್ನ ಅಪ್ರಾಪ್ತ ವಯಸ್ಕ ಮಗುವಿನ ಪರವಾಗಿ ದಾನ ಸ್ವೀಕರಿಸಬಹುದೇ ?**

ಇಲ್ಲ. ತಾಯಿಯು ತನ್ನ ಅಪ್ರಾಪ್ತ ವಯಸ್ಕ ಮಗುವಿನ ಪರವಾಗಿ ದಾನ ಸ್ವೀಕರಿಸುವಂತಿಲ್ಲ. ಅಂಥ ಒಂದು ದಾನವನ್ನು ಮಗುವಿನ ತಂದೆ ಸ್ವೀಕರಿಸಬಹುದು. ತಂದೆ ಇಲ್ಲದಿದ್ದಾಗ ಕಾನೂನುಬದ್ಧ ಪೋಷಕರು ದಾನವನ್ನು ಸ್ವೀಕರಿಸಬೇಕಾಗುತ್ತದೆ. ಹಾಗೆಯೇ ತಾಯಿಯೇ ತನ್ನ ಅಪ್ರಾಪ್ತ ವಯಸ್ಕ ಮಗುವಿಗೆ ದಾನ ಮಾಡಿದಾಗ, ಅದನ್ನು ಮಗುವಿನ ತಂದೆ ಅಥವಾ ಕಾನೂನುಬದ್ಧ ಪೋಷಕನು ಸ್ವೀಕರಿಸಬೇಕು. ಇಲ್ಲದಿದ್ದರೆ ದಾನವು ಮಾನ್ಯವಾಗುವುದಿಲ್ಲ.






**ಹನಾಫಿ ಮತ್ತು ಶಿಯಾ ಕಾನೂನುಗಳಲ್ಲಿ ಯಾವುದೇ ವ್ಯತ್ಯಾಸ ಅಂಶಗಳಿವೆಯೇ ?**

ಹೌದು. ಪ್ರಮುಖ ವ್ಯತ್ಯಾಸವೆಂದರೆ ಹನಾಫಿ ಕಾನೂನಿನಲ್ಲಿ ಪತಿ ಮತ್ತು ಪತ್ನಿಯ ನಡುವೆ ಮಾಡಲಾದ ದಾನವನ್ನು ಒಂದು ಸಾರಿ ಮಾಡಿದ ಮೇಲೆ ಹಿಂತೆಗೆದುಕೊಳ್ಳುವಂತಿಲ್ಲ. ಶಿಯಾ ಕಾನೂನಿನ ಪ್ರಕಾರ ಪತ್ನಿ ಮತ್ತು ಪತಿಯ ನಡುವೆ ಮಾಡಲಾದ ದಾನವನ್ನು ಹಿಂತೆಗೆದುಕೊಳ್ಳಬಹುದು.

## ಉಯಿಲು ಬರೆಯುವುದು ಹೇಗೆ ?

- ನಿಮ್ಮ ಪೂರ್ಣ ಹೆಸರನ್ನು ಬರೆಯಿರಿ
- ನಿಮ್ಮ ತಂದೆ ಅಥವಾ ಪತಿಯ ಹೆಸರನ್ನು ಬರೆಯಿರಿ
- ನಿಮ್ಮ ಪೂರ್ಣ ವಿಳಾಸವನ್ನು ಬರೆಯಿರಿ.
- ನಿಮ್ಮ ಆಸ್ತಿಯ ಬಗ್ಗೆ ವಿವರವಾಗಿ ಬರೆಯಿರಿ.
- ನಿಮ್ಮ ಆಸ್ತಿಯನ್ನು ಯಾರಿಗೆ ಕೊಡಬಯಸುವಿರೋ ಅವರ ಹೆಸರುಗಳು ಮತ್ತು ವಿಳಾಸಗಳನ್ನು ಸ್ಪಷ್ಟವಾಗಿ ಬರೆಯಿರಿ.
- ನಿಮಗೆ ಪೂರ್ಣ ಅರಿವಿರುವಾಗ ಸ್ವಇಚ್ಛೆಯಿಂದ ಉಯಿಲು ಬರೆಯುತ್ತಿದ್ದೀರೆಂದು ಅದರಲ್ಲಿ ಸೂಚಿಸಿ,
- ಉಯಿಲಿಗೆ ಇಬ್ಬರು ಸಾಕ್ಷಿಗಳು ಸಹಿ ಮಾಡಬೇಕು. ಅವರ ಹೆಸರುಗಳು ಮತ್ತು ವಿಳಾಸಗಳನ್ನು ಸಹ ಬರೆಯಬೇಕು.

**ನೆನಪಿನಲ್ಲಿ ಡಿ:-** ಉಯಿಲು ಅದನ್ನು ಮಾಡಿದವರು ಮೃತರಾದ ನಂತರ ಮಾತ್ರ ಜಾರಿಗೆ ಬರುತ್ತದೆ. ಉಯಿಲು ಮಾಡಿದೆ ಎಂಬ ಕಾರಣದ ಮಾತ್ರದಿಂದ ಆಸ್ತಿಯು ಬೇರೆ ಯಾರ ವಶಕ್ಕೂ ಹೋಗುವುದಿಲ್ಲ.

ಒಬ್ಬ ಮುಸ್ಲಿಂ ವ್ಯಕ್ತಿಯ ಉಯಿಲು ಲಿಖಿತದಲ್ಲಿರಬಹುದು ಅಥವಾ ಮೌಖಿಕವಾಗಿರಬಹುದು. ಅದಕ್ಕೆ ಯಾವುದೇ ನಿರ್ದಿಷ್ಟ ನಮೂನೆಯಿಲ್ಲ. ಆದರೆ ಅದರಿಂದ ಉಯಿಲು ಮಾಡುವ ಉದ್ದೇಶ ಸ್ಪಷ್ಟವಾಗಬೇಕು. ಉಯಿಲನ್ನು ಲಿಖಿತದಲ್ಲಿ ಮಾಡುವುದು ಉತ್ತಮ. ಉಯಿಲನ್ನು ಸಾದಾ ಕಾಗದದ ಮೇಲೆ ಕೂಡಾ ಬರೆಯಬಹುದು.

## ಈ ಮಾಲಿಕೆಯಲ್ಲಿ

'ನಮ್ಮ ಕಾನೂನುಗಳು' ಮಹಿಳೆಯರಿಗೆ ಸಾಮಾನ್ಯವಾಗಿ ಅನ್ವಯಿಸುವ ಕಾನೂನುಗಳ ಬಗ್ಗೆ ಸರಳರೀತಿಯಲ್ಲಿ ತಿಳುವಳಿಕೆ-ನೀಡುವ ಹತ್ತು ಪುಸ್ತಿಕೆಗಳ ಒಂದು ಮಾಲಿಕೆಯಾಗಿದೆ. ಈ ಮಾಲಿಕೆಯಲ್ಲಿ, ಕೆಳವರ್ಗದ ಹೆಂಗಸರು, ಅದರಲ್ಲೂ ನವ ಸಾಕ್ಷರ ಮಹಿಳೆಯರು, ಬಳಸಲಿಕ್ಕೆ ಸಾಧ್ಯವಾಗಲಿ ಎನ್ನುವ ಉದ್ದೇಶದಿಂದ ನಿರೂಪಣೆಯನ್ನು ಸಾಧ್ಯವಾದಷ್ಟೂ ಸರಳವಾಗಿ, ಸಂಕ್ಷಿಪ್ತವಾಗಿ, ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ, ಉಪಮೆಗಳನ್ನ, ಉದಾಹರಣೆಗಳನ್ನ ನೀಡಿ ರಚಿಸಲಾಗಿದೆ. ಯಾರಿಗೆ ಈ ಕಾನೂನುಗಳು ತೀರ ಅವಶ್ಯಕವಿದೆಯೋ ಅಂತಹವರನ್ನ ಈ ಪುಸ್ತಿಕೆಗಳು ತಲುಪಬೇಕೆಂದು ನಮ್ಮ ಆಶಯ. ಈ ಹತ್ತು ಪುಸ್ತಕಗಳು ಕಾನೂನಿನ ಸಮಗ್ರ ಪಾಠವೇನಲ್ಲ. ಒಟ್ಟಾರೆಯಾಗಿ ಮಹಿಳೆಯರಿಗೆ ತಮ್ಮ ನಾಗರೀಕ ಹಕ್ಕುಗಳ ಅರಿವಾಗಲಿ, ಅವರು ಆತ್ಮವಿಶ್ವಾಸದಿಂದ ಹಾಗೂ ಸಂದಿಗ್ಧರಹಿತ ರೀತಿಯಲ್ಲಿ ತಮ್ಮ ಸಮಸ್ಯೆಗಳಿಗೆ ತಾವೇ ಧ್ವನಿಕೊಡುವಂತಾಗಲಿ ಎಂದು ಈ ಮಾಲಿಕೆ ಬಯಸುತ್ತದೆ.

ಈ ಪುಸ್ತಿಕೆಗಳ ಹಿಂದಿ ಅನುವಾದದಲ್ಲಿ, ಈಗಾಗಲೇ ಅವುಗಳನ್ನ, ಗ್ರಾಮೀಣ ಮಹಿಳೆಯರ ಕಾರ್ಯಾಗಾರಗಳಲ್ಲಿ ಬಳಸಿ, ಇವುಗಳ ಪರಿಣಾಮವನ್ನ ಪರೀಕ್ಷಿಸಲಾಗಿದೆ. ಹಲವು ಸಾಮಾಜಿಕ ಕಾರ್ಯಕರ್ತರುಗಳೊಡನೆ, ಕಾನೂನು ತಜ್ಞರುಗಳೊಡನೆ, ನಡೆಸಿದ ಕಾರ್ಯಾಗಾರಗಳಲ್ಲಿ ಕೂಡ ಇವುಗಳ ಬಳಕೆ ಹಾಗೂ ಪರೀಕ್ಷೆ ಆಗಿದೆ. ಆಗ ಬಂದ ಅಭಿಪ್ರಾಯಗಳನ್ನ ಮನನ ಮಾಡಿ ಪುಸ್ತಿಕೆಗಳನ್ನ ತಿದ್ದಿ ಪ್ರಕಟಿಸಲಾಗಿದೆ.

ಈಗ ಕನ್ನಡದಲ್ಲಿ **'ನಮ್ಮ ಕಾನೂನುಗಳು'** ನಿಮ್ಮ ಕೈಸೇರುತ್ತಿದೆ. ಮೇಲೆ ಹೇಳಿದ ಆಶಯಗಳನ್ನ ಗಮನದಲ್ಲಿಟ್ಟುಕೊಂಡು, ಇಲ್ಲಿ ಸಲ್ಲುವ ಉಪಮೆಗಳು, ಉದಾಹರಣೆಗಳನ್ನ, ಬಳಸಿಕೊಂಡು ಹೆಗ್ಗೋಡಿನ **ಕವಿಕಾವ್ಯ ಟ್ರಸ್ಟಿನವರು** ಕನ್ನಡ ಅವತರಣಿಕೆಯನ್ನ ಸಿದ್ಧಗೊಳಿಸಿದ್ದಾರೆ. **ಯುನಿಸೆಫ್** ಸಂಸ್ಥೆಯ ಉದಾರ ನೆರವಿನಿಂದಾಗಿ ಇದರ ಪ್ರಕಟಣೆ ಸಾಧ್ಯವಾಗುತ್ತಿದೆ. ಈ ಪುಸ್ತಕಗಳ ಪ್ರಯೋಜನವನ್ನ, ನವಸಾಕ್ಷರ ಮಹಿಳೆಯರು, ದುಡಿಯುವ ಮಹಿಳೆಯರ ಸಂಘಟನೆಗಳು, ಅಂಗನವಾಡಿ ಕಾರ್ಯಕರ್ತೆಯರು, ಪಂಚಾಯತಿ ಹಾಗೂ ತಾಲ್ಲೂಕು ಮಟ್ಟದ ಅಧಿಕಾರಿಗಳು, ಆರೋಗ್ಯ ಕಾರ್ಯಕರ್ತರು, ಶಾಲಾ ಅಧ್ಯಾಪಕರುಗಳು, ಸಾಕ್ಷರತಾ ಕಾರ್ಯಕರ್ತರು, ಹಾಗೂ 'ಡ್ವಾಕ್ರ' ಗುಂಪುಗಳು, ಪಡೆಯಬೇಕೆಂಬ ಉದ್ದೇಶದಿಂದ ಕರ್ನಾಟಕ ರಾಜ್ಯಮಹಿಳಾ ಅಬಿವೃದ್ಧಿ ನಿಗಮ, ವ್ಯಾಪಕ ರೀತಿಯಲ್ಲಿ ಅವುಗಳನ್ನ ಜನತೆಗೆ ತಲುಪಿಸಲು ಏರ್ಪಾಡುಮಾಡಿದೆ.

**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ**

16ನೆಯ ಮಹಡಿ, ಬಹುಪಯೋಗಿ ಕಟ್ಟಡ, ಮಹಾತ್ಮಗಾಂಧಿ ರಸ್ತೆ

ಬೆಂಗಳೂರು : 560001, ಫೋ: 5587418, 5588250

**ಮೂಲ ಪ್ರಕಾಶಕರು**

**ಮಾರ್ಗ್**

113-ಎ, ಶಾಪುರ್ ಜಾಟ್, ಏಷಿಯಾಡ್ ಗ್ರಾಮದ ಸಮೀಪ

ನವದೆಹಲಿ-110016, ಫೋ : 6467463.